ತೇರದಾಳ

## ಶ್ರೀಮನ್ನಿರಂಜನ ಜಗದ್ಗುರು

## ಶ್ರೀಮದನಾದಿ

# ಅಲ್ಲಮಪ್ರಭು


ಲೇಖಕರು ಮತ್ತು ಪ್ರಕಾಶಕರು:

**ಬುಪ್ಪಯ್ಯ ಮಗೆಯ್ಯಸ್ವಾಮಿ ಪುರಾಣೀಕ**



ಪ್ರಥಮ ಮುದ್ರಣ ೧೦೦೦ ಪ್ರತಿಗಳು

೧೯೩೬



ಈ ಪುಸ್ತಕದ ಎಲ್ಲ ತರದ ಹಕ್ಕುಗಳೂ ಲೇಖಕರಿಗೆ ಸೇರಿವೆ.



ಬೆಲೆ: ೧ ರೂಪಾಯಿ

# ಪರಿವಿಡಿ



Checked 1969




ಈ ಪುಸ್ತಕದ ೧ರಿಂದ ೯೬ ಪುಟಗಳು ಬಿಜಾಪುರದ ರಾವಸಾಹೇಬ ಪಿ. ಜಿ. ಹಳಕಟ್ಟಿ ಇವರ ಹಿತಚಿಂತಕ ಮುದ್ರಣಾಲಯದಲ್ಲಿ ಮುದ್ರಿತವಾಯಿತು.

ಮತ್ತು

ಪುಟ ೯೭ರಿಂದ ೧೬೪ರ ವರೆಗೆ, ರಕ್ಷಾಕವಚ, ಮುನ್ನುಡಿ ಮತ್ತು ಬರೆದವನ ಬಿನ್ನಹ ಇವುಗಳು ಧಾರವಾಡದ ಶ್ರೀ ತೋಂಟದಾರ್ಯ ಮುದ್ರಾಲಯದಲ್ಲಿ ಶ್ರೀ. ಎಸ್. ಬಿ. ಹರಿಹರ ಇವರಿಂದ ಮುದ್ರಿತವಾಯಿತು.

ಮತ್ತು

ಶಿವಮೂರ್ತಿ ಬುದ್ಧಯ್ಯಾ ಮಗೆಯ್ಯಾ ಪುರಾಣೀಕ ಇವರಿಂದ ತೋಂಟದಾರ್ಯ ಮುದ್ರಾಲಯದಲ್ಲಿಯೇ ಪ್ರಕಟಿಸಲ್ಪಟ್ಟಿತು.

Checked 1965

# ಮುನ್ನುಡಿ

ಸಮಾಜೋದ್ಧಾರಕಾರ್ಯದಲ್ಲಿ ಶ್ರೀ ಅಲ್ಲಮಪ್ರಭುದೇವನು ಅಗ್ರ
ನಲ್ಲಿರುವ ಧ್ರುವತಾರೆಯಂತಿರುವನು. ಈತನ ವಿಷಯವಾಗಿ ಅನೇಕ
ಗ್ರಂಥಗಳೂ ಸ್ತೋತ್ರಗ್ರಂಥಗಳೂ ಉಂಟಾಗಿರುವುವು. ಆದರೂ ಈತನ
ಚರಿತ್ರೆಯ ಎಷ್ಟೋ ಸಂಗತಿಗಳು ನಿಷ್ಕೃಷ್ಟವಾಗಿ ಗೊತ್ತಾಗುವಂತಿಲ್ಲ.
ಐತಿಹಾಸಿಕ ದೃಷ್ಟಿಯಿಂದ ಇವುಗಳನ್ನು ಸಂಶೋಧಿಸಿ ಗ್ರಂಥರೂಪದಿಂದ
ಶ್ರೀಮಾನ್ ಪ್ರಾಣಿಕ ಬಾವಚಿ ನವರು ಹೊರಗೆಡಹಿ ಕರ್ನಾಟಕಕ್ಕೆ
ಮಹೋಪಕಾರವನ್ನು ಮಾಡಿರುವರು. ಇವರ ಮೊದಲನೆಯ ಪ್ರಕರಣದ
ಆರಂಭದ ಅಂದಿರುವಂತೆ ಪ್ರಭುದೇವನು ನಾಟಕದ ಗೊರವನು, ನಿರಂ-
ಜನನು, ಮಾಯಾಕೋಲಾಹಲನು, ಅನಾದಿ ಜಂಗಮಲಿಂಗನು. ಇಂಥವನ
ವಿಷಯವಾಗಿ ತಾವು ಬರೆದ ಗ್ರಂಥಕ್ಕೆ ಮುನ್ನುಡಿಯನ್ನು ಬರೆಯಲಿಕ್ಕೆ
ನನಗೆ ಪ್ರಸಂಗವನ್ನು ತಂದು ಕೊಟ್ಟದ್ದಕ್ಕಾಗಿ ನಾನು ಇವರಿಗೆ ತುಂಬಾ
ಕೃತಜ್ಞನಾಗಿರುವೆನು.

ಪ್ರಭುದೇವನಿಗೂ ತಮಗೂ ಯಾವ ತರದ ಸಂಬಂಧವಿದೆಯೆಂಬ
ದನ್ನು ಅವರು ಈ ಪ್ರಕರಣದಲ್ಲಿ ಸೂಚಿಸಿರುವರು. ಇವರು ಪ್ರಭು
ದೇವನ ಪ್ರಿಯಶಿಷ್ಯನಾದ ಚನ್ನಕ್ಕದೇವನ ವಂಶಜರು. ಆದುದರಿಂದ
ಇವರು ಪ್ರಭುದೇವನ ಚರಿತ್ರೆಯ ಸಂಗತಿಗಳ ವಿಷಯವಾಗಿ ಬರೆಯುವುದಕ್ಕೆ
ಅಧಿಕಾರಪ್ರಾಪ್ತರೆಂಬುದು ಬೇರೆ ಹೇಳಲಿಕ್ಕೆ ಬೇಡ.

ಈ ಗ್ರಂಥದ ಮೊದಲನೆಯ ಪ್ರಕರಣದಲ್ಲಿ ಲೇಖಕರು ಪ್ರಭು
ದೇವನ ಕಾಲವನ್ನು ನಿಶ್ಚಯಿಸಿರುವರು. ಪ್ರಭುದೇವನು ಕ್ರಿ. ಶ.
ಪೂರ್ವದಲ್ಲಿ [illegible]ನೆಯ ಶತಮಾನದಿಂದ ಕ್ರಿ. ಶ. [illegible]ನೆಯ ಶತಮಾನದ
ಮಧ್ಯದವರೆಗೆ ಇದ್ದನೆಂದು ಇವರ ಅಭಿಪ್ರಾಯವು ವ್ಯಕ್ತವಾಗಿರುವದು.
ಪ್ರಭುದೇವನು ಮೊದಲು ಕಲ್ಯಾಣಕ್ಕೆ ಬಂದ. ಶ್ರೀ ಬಸವೇಶ್ವರ ಮುಂತಾ
ದವರಿಗೆ ಷಟ್‌ಸ್ಥಲ ಮಾರ್ಗವನ್ನು ಬೋಧಿಸಿ, ಅಲ್ಲಿಂದ ಹೊರಟು ಬೇರೆ
ಬೇರೆ ಭಾಗಗಳಲ್ಲಿ ಸಂಚರಿಸಿ ಗೋರಕ್ಷ ಮೊದಲಾದವರನ್ನು ಉದ್ಧಾರ

ಮಾಡಿ, ಮತ್ತೊಮ್ಮೆ ಕಲ್ಯಾಣಕ್ಕೆ ಬಂದು ಶ್ರೀ ಬಸವೇಶ್ವರರು ನಿರ್ಮಿ
ಸಿದ ಶೂನ್ಯಪೀಠವನ್ನೇರಿದನು. ಇದು ೧೨ನೆಯ ಶತಮಾನದ ಮಧ್ಯದಲ್ಲಿ.
ಈ ಕಾಲಕ್ಕಿಂತ ಎಷ್ಟೋ ವರುಷಗಳ ಮುಂಚೆ ಅವನು ಅವತರಿಸಿದನೆನ್ನ
ಬಹುದು. ಆದರೆ ಅವನ ಅವತಾರದ ಆರಂಭದಕಾಲ, ಅವನು ಐಕ್ಯ
ವಾದ ಸ್ಥಾನ ಮೊದಲಾದ ಕೆಲವು ವಿಷಯಗಳ ಬಗ್ಗೆ ಭಿನ್ನಾಭಿಪ್ರಾಯ
ಗಳಾಗುವ ಸಂಭವವುಂಟು. ಈ ವಿಷಯಗಳನ್ನು ವಿಮರ್ಶಕಾರರಿಗೆ ಬಿಡು
ವದು ಒಳ್ಳೆಯದು.

೨ನೆಯ ಪ್ರಕರಣದಲ್ಲಿ ಪ್ರಭುವಿನ ಸಂಚಾರದ ವರ್ಣನೆಯಿದೆ.
ಇವನು ಸಂದರ್ಶಿಸಿದ ಎಷ್ಟೋ ಗ್ರಾಮಗಳಲ್ಲಿ ಇವನ ಹೆಸರಿನ ಮಠಗಳಿರು
ವುವು. ಬೆಳಗಾಂವ ಜಿಲ್ಲೆಯ ಹುಕ್ಕೇರಿ ತಾಲೂಕಿನಲ್ಲಿರುವ ಒಂಟಮೂರಿಯ
ಸರದೇಸಾಯರಾದ ಶ್ರೀಮಂತ ರಾಜಾ ಲಖಮಗೌಡಾ ಬಸವಪ್ರಭು
ಇವರ ಮೂಲಪುರುಷನಾದ ಪ್ರಭು ಬಸವಂತರಾಯನು ಪ್ರಭುವಿನ ಆಶೀ
ರ್ವಾದದಿಂದ ಘನತೆಗೇರಿ ದೊಡ್ಡ ಜಹಾಗೀರಿಯನ್ನು ದೊರಕಿಸಿದನು. ಅಂದಿ
ನಿಂದ ಈ ಹೊತ್ತಿನವರೆಗೆ ಒಂಟಮೂರಿಯ ಸರದೇಸಾಯರ ಮನೆತನದ
ವರು ಪ್ರಭುವಿನ ಪರಮಭಕ್ತರಾಗಿರುವರು. ಸಾಂಗಲೀ ಸಂಸ್ಥಾನದ ತೇರ
ದಾಳ ತಾಲೂಕಿನ ಹನಗಂಡಿ ಗ್ರಾಮದ ದೇಸಾಯರು ಮೊದಲು ಜೈನ
ಮತಾನುಯಾಯಿಗಳಾಗಿದ್ದರು. ಅವರಿಗೆ ಪ್ರಭುವು ಲಿಂಗಧಾರಣೆಯನ್ನು
ಮಾಡಿದನು. ಇತ್ತೀಚೆಗೆ ಕ್ರಿ. ಶ. ೧೭೪೮ನೆಯ ಇಸ್ವಿಯಲ್ಲಿ ಅವರ ಮನೆ
ತನದ ಸತ್ಯೆವ್ವನೆಂಬವಳು ತನ್ನ ಚಿಕ್ಕ ಮಗನೊಡನೆ ಜೈನ ಧರ್ಮವನ್ನು
ಸ್ವೀಕರಿಸಿದಳು. ಆದರೂ ಆ ಮನೆತನದವರು ಈಗೂ ಪ್ರಭುವಿಗೆ ಒಳ್ಳೇ
ಭಕ್ತಿಯಿಂದ ನಡಕೊಳ್ಳುತ್ತಿರುವರು. ಈ ಎಲ್ಲ ಸಂಗತಿಗಳೂ ಒಂಟಮೂರಿ
ಸರದೇಸಾಯರ ಮತ್ತು ಹನಗಂಡೀ ದೇಸಾಯರ ಮನೆತನಗಳ ಸಂಕ್ಷಿಪ್ತ
ಚರಿತ್ರೆಗಳೂ ಈ ಪ್ರಕರಣದಲ್ಲಿ ವರ್ಣಿತವಾಗಿವೆ.

೩ನೆಯ ಪ್ರಕರಣದಲ್ಲಿ ಪ್ರಭುದೇವನು ತನ್ನ ಸಂಚಾರವನ್ನು ತೀರಿಸಿ
ಸಾಂಗಲೀ ಸಂಸ್ಥಾನದಲ್ಲಿರುವ ತೇರದಾಳಗ್ರಾಮಕ್ಕೆ ಬಂದು ಅಲ್ಲಿ ಬಯ್ಯ
ಲಾದ ಸಂಗತಿಯೂ ಅಲ್ಲಿರುವ ಅವನ ಮಠದ ವೈಭವವೂ ಅದರ ಸುತ್ತಲು
ಸುಮಾರು ನೂರು ಹರಧಾರಿಗಳವರೆಗೆ ಬ್ರಾಹ್ಮಣ ಮುಂತಾದ ಲಿಂಗಾಯ
ತೇತರ ಎಷ್ಟೋ ಹಿಂದೂ ಮನೆತನಗಳಲ್ಲಿ ಸಹ ಪ್ರಭುದೇವನು ಕುಲ

ಸ್ವಾಮಿಯಾಗಿ ಪೂಜೆಗೊಳ್ಳುವದೂ ಹೃದಯಂಗಮವಾಗಿ ವರ್ಣಿಸಲ್ಪಟ್ಟಿರುವುವು. ಪ್ರಭುವು ಶ್ರೀಶೈಲದಲ್ಲಿ ಕದಳೀಬನವೆಂದು ತೋರಿಸಲ್ಪಡುವ ಸ್ಥಳದಲ್ಲಿ ಐಕ್ಯನಾಗದೆ ತೇರದಾಳದಲ್ಲಿಯೇ ಐಕ್ಯನಾಗಿರುವನೆಂಬ ಬಗ್ಗೆ ಲೇಖಕರು ಅನೇಕ ಆಧಾರಗಳನ್ನು ಕೊಟ್ಟಿರುವರು.

೬ನೆಯ ಪ್ರಕರಣದಲ್ಲಿ ಲಿಂಗಾಯತ ಸಮಾಜಕ್ಕೆ ಮಹತ್ವವುಳ್ಳ ಕೆಲವು ಸಂಗತಿಗಳು ಅಡಕವಾಗಿವೆ. ಇವರಲ್ಲಿ ಮೂಲ ಪಂಚಾಚಾರ್ಯರ ವಿಷಯವಾಗಿ ಮಹಾಮಹೋಪಾಧ್ಯಾಯ ಪ್ರಾ. ವಿ. ವಿ. ರಾ. ಬ. ಆರ್. ನರಸಿಂಹಾಚಾರ್ಯರು ತಮ್ಮ "ಕರ್ನಾಟಕ ಕವಿಚರಿತೆ" ಯಲ್ಲಿ ಕೊಟ್ಟ ಅವತರಣಿಕೆಗಳನ್ನೇ ಲೇಖಕರು ತಮ್ಮ ಆಧಾರಗಳೆಂತಿಟ್ಟುಕೊಂಡು ಕಡೆಗೆ "ಸ್ವಾಯಂಭು ಆಗಮ" ಮತ್ತು "ಸಿದ್ಧಾಂತ ಶಿಖಾಮಣಿ" ಗ್ರಂಥಗಳ ಆಧಾರದ ಮೇಲಿಂದ ಇವರಾದರೂ ಜಂಗಮಲಿಂಗದ ಕೂತ ಭೂಮಿಯ ಮೇಲೆ ಅವತರಿಸಿದರೆಂದು ಹೇಳಿರುವರು.

ಲಿಂಗಾಯತರಲ್ಲಿ ಮುಖ್ಯವಾಗಿ ಭಕ್ತವರ್ಗ, ಗುರುವರ್ಗ ಮತ್ತು ವಿರಕ್ತವರ್ಗ ಎಂಬ ಮೂರು ವರ್ಗಗಳು ರೂಢಿಯಲ್ಲಿರುವುವು. ಮೊದಲಿನ ಎರಡು ವರ್ಗಗಳಲ್ಲಿ ಪಂಗಡಗಳಿರುವುದು ಸಹಜವು. ಆದರೆ ವಿರಕ್ತವರ್ಗದಲ್ಲಿ ಸಹ ಪಂಗಡಗಳಿರುವದು ಆಶ್ಚರ್ಯಕರವಾಗಿದೆ. ಈ ವರ್ಗದವರು ಜಂಗಮಲಿಂಗನಾದ ಪ್ರಭುದೇವನ ಸಾಂಪ್ರದಾಯಿಕರು. ಇವರಲ್ಲಿ ಮುರಗಿ, ಚಿಲ್ಲಾಳ, ಕುಮಾರ, ಕೆಂಪಿನ ಮತ್ತು ಸಂಪಾದನೆ ಎಂಬ ಭೇದಗಳು ಹೇಗೆ ಉಂಟಾದವೆಂಬದನ್ನು ಲೇಖಕರು ಈ ಪ್ರಕರಣದಲ್ಲಿ ವಿಸ್ತಾರವಾಗಿ ಹೇಳಿರುವರು. ಈ ಭೇದಗಳಿಗೆ ಸಮಯಭೇದಗಳೆನ್ನುವರು. ಈ ಸಮಯಗಳ ಮುಖ್ಯ ಮಠಗಳು ಅನುಕ್ರಮವಾಗಿ ಮೈಸೂರ ಸಂಸ್ಥಾನದೊಳಗಿರುವ ಚಿತ್ರಕಲ್ಲದುರ್ಗ, ಹಾಗಲವಾಡಿ ಮತ್ತು ಎಡೆಯೂರ, ಧಾರವಾಡ ಜಿಲ್ಹೆಯೊಳಗಿರುವ ಹುಬ್ಬಳ್ಳಿ, ಮತ್ತು ಗದಗ, ಹೈದರಾಬಾದ ಸಂಸ್ಥಾನದೊಳಗಿರುವ ಕಲ್ಯಾಣ ಹೀಗೆ ಈ ಸ್ಥಳಗಳಲ್ಲಿ ಇರುತ್ತವೆ. ಈ ಪ್ರತಿಯೊಂದು ಮಠಕ್ಕೆ ಶಾಖಾಮಠಗಳಿರುವುವಲ್ಲದೆ ಒಂದೊಂದು ಸಮಯದ ಸ್ವತಂತ್ರವಾದ ಎಷ್ಟೋ ಮಠಗಳು ಅನೇಕ ಸ್ಥಳಗಳಲ್ಲಿ ಇರುವುವು. ಪ್ರತಿಯೊಂದು ಮಠಕ್ಕೆ ಭಕ್ತರು ಶಿಷ್ಯರನ್ನು ಬಿಡುವ ಸಾಂಪ್ರದಾಯವುಂಟು. ಇವರಿಗೆ ಮರಿಗಳೆಂದೆನ್ನುತ್ತಾರೆ. ಮಠದ ಅಧಿಕಾರಿಗಳಾದ ಸ್ವಾಮಿಗಳು

ಸ್ವಾಧಿಕಾರದಿಂದಾಗಲೀ ಭಕ್ತರ ಸಮ್ಮತಿಯಿಂದಾಗಲೀ ತಾವು ದೇಹವಿಡುವ ಮುಂಚೆ ತಮ್ಮ ಮರಿಗಳಲ್ಲೊಬ್ಬರನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಆರಿಸುವ ರೂಢಿಯುಂಟು. ಹೀಗೆ ಆರಿಸದೆ ಇದ್ದರೆ ಸ್ವಾಮಿಗಳು ದೇಹವಿಟ್ಟನಂತರ ಆ ಮಠದ ಭಕ್ತರು ತಮಗೆ ಯೋಗ್ಯಕಂಡ ಮರಿಯನ್ನಾಗಲೀ ಬೇರೆಯವರನ್ನಾಗಲೀ ಮಠಕ್ಕೆ ಅಧಿಕಾರಿಯಾಗಿ ಆರಿಸುವರು. ಹೀಗೆ ಆರಿಸಿದವರನ್ನು ವಿಧಾನಪೂರ್ವಕ ಪಟ್ಟದ ಮೇಲೆ ಕೂಡ್ರಿಸಿ ಅವರಿಗೆ ಮಠದ ಸರ್ವಾಧಿಕಾರವನ್ನು ಒಪ್ಪಿಸುವರು.

ಆರಂಭದಲ್ಲಿ ಈ ಪದ್ಧತಿಯು ಇದ್ದಿದ್ದಿಲ್ಲ. ವಿರಕ್ತಸ್ವಾಮಿಗಳು ಹಳ್ಳಿಯಲ್ಲಿ ಒಂದು ದಿವಸ ಪಟ್ಟಣದಲ್ಲಿ ಐದು ದಿವಸ ಭಕ್ತರ ಉದ್ಧಾರಾರ್ಥವಾಗಿ ಉಳಿದು ಯಾವಾಗಲೂ ಸಂಚಾರದಲ್ಲಿಯೇ ಇರುತ್ತಿದ್ದರು. ಬರಬರುತ್ತ ಭಕ್ತರ ಭಕ್ತ್ಯಾದರಗಳು ಈ ಸ್ವಾಮಿಗಳಲ್ಲಿ ಹೆಚ್ಚಾಗುತ್ತ ಹೋಗಿ ಅವರ ಸಾನ್ನಿಧ್ಯವು ತಮಗೆ ಸದಾಕಾಲವು ಬೇಕೆಂದೆನಿಸಿ ಅವರ ಸಲುವಾಗಿ ಒಬ್ಬರೇ ಆಗಲೀ ಊರ ಭಕ್ತರೆಲ್ಲ ಕೂಡಿಯಾಗಲಿ ಊರ ಹೊರಗೆ ಮಠಗಳನ್ನು ಕಟ್ಟಿಸಿಕೊಡಹತ್ತಿದರು. ಈ ಮಠಗಳ ಮೊದಲಿನ ಸ್ವಾಮಿಗಳು ದೇಹವಿಟ್ಟ ಮೇಲೆ ಅವರ ತರುವಾಯ ಅಲ್ಲಿ ಎರಡನೇ ಸ್ವಾಮಿಗಳಿಲ್ಲದೆ ಇರುವದು ಸಹಜವಾಗಿ ಅಪ್ರಶಸ್ತವೆನಿಸಿರಬಹುದು. ಈ ಕಾರಣದಿಂದ ಆ ಮಠಗಳಿಗೆ ಒಬ್ಬರ ಹಿಂದೊಬ್ಬರನ್ನು ಅಧಿಕಾರಿಗಳನ್ನಾಗಿ ಮಾಡುವ ಸಾಂಪ್ರದಾಯವು ರೂಢಿಯಲ್ಲಿ ಬಂತು. ಈ ರೂಢಿಯಿಂದ ಈ ಮಠಗಳಿಗೆ ಅಧಿಕಾರಿಗಳಾದ ಸ್ವಾಮಿಗಳೆಲ್ಲರೂ ಯೋಗ್ಯರಾದವರೇ ದೊರೆತರೆಂದು ಹೇಳಲಿಕ್ಕೆ ಬರಲಾರದು. ಸಮಾಜದಲ್ಲಿ ಮೇಲಿಂದ ಮೇಲೆ ಪಂಗಡಗಳುಂಟಾಗುವದು ಸ್ವಾಭಾವಿಕವು. ಈ ಪರಿಸ್ಥಿತಿಗನುಸರಿಸಿ ಹೆಚ್ಚು ಕಡಿಮೆ ಯೋಗ್ಯತೆಯುಳ್ಳ ಸ್ವಾಮಿಗಳು ಮಠಗಳಿಗೆ ಅಧಿಕಾರಿಗಳಾಗುತ್ತ ಬಂದರು. ವಿರಕ್ತವರ್ಗದಲ್ಲಿ ಸಮಯಭೇದವಾಗಲಿಕ್ಕೆ ಇಂಥ ಪರಿಸ್ಥಿತಿಯು ಅನುಕೂಲವಾಗಿರಲಿಕ್ಕೆ ಬೇಕು.

ಈ ಪ್ರಸಂಗದಲ್ಲಿ ಮಹಿಮಾಶಾಲಿಗಳಾದವರು ಒಂದು ವಿಶಿಷ್ಟ ವರ್ಗದಲ್ಲಿ ಜನ್ಮವೆತ್ತುತ್ತಾರೆನ್ನುವಂತಿಲ್ಲ. ಈ ನಿಯಮಕ್ಕನುಸರಿಸಿ ಲಿಂಗಾಯತರಲ್ಲಿ ಅವರು ಭಕ್ತವರ್ಗದಲ್ಲಿಯೂ ಜಂಗಮವರ್ಗದಲ್ಲಿಯೂ ಬೇರೆ ಬೇರೆ ಹೋರೆಗಳನ್ನು ಮಾಡುವ ವರ್ಗಗಳಲ್ಲಿಯೂ ಜನಿಸಿರುವರು ಅವರು

ಬ್ರಹ್ಮಚಾರಿಗಳಾಗಿದ್ದು ಕಡೆತನಕ ಹಾಗೇ ಉಳಿಯಬಹುದು, ಅಥವಾ ಸಂಸಾರಿಗಳಿರಬಹುದು. ಸಂಸಾರಿಗಳಾದ ಮಹಿಮಾಶಾಲಿಗಳ ಉದಾಹರಣೆ ಗಳೆಂದರೆ ಸೊಲ್ಲಾಪುರದಲ್ಲಿ ವಾಸಮಾಡಿದ ನಾಲ್ವತ್ತವಾಡದ ಶರಣರು ಮತ್ತು ಕಲಬುರ್ಗಿಯ ಶರಣಬಸವೇಶ್ವರರು. ಮಹಿಮಾಶಾಲಿಗಳಾದ ಪುರ್ರು ಷರಿಗೆ ಎಲ್ಲ ಜನರು ಭಕ್ತ್ಯಾದರಗಳನ್ನು ತೋರಿಸುವದುಂಟು ಸಾಂಸಾರಿಕ ಮಹಿಮಾಶಾಲಿಗಳ ಜೀವಮಾನದ ನಂತರ ಅವರ ವಂಶಜರು ಸಹ ತಮ್ಮ ಪೂರ್ವಜರಂತೆ ಮಹಿಮಾಶಾಲಿಗಳಾಗಿದ್ದರೆ ಅವರಿಗೂ ಜನರು ಭಕ್ತ್ಯಾದರ ಗಳನ್ನು ತೋರಿಸುವದು ಸಹಜವೇ. ಒಂದು ವೇಳೆ ಹಾಗಿಲ್ಲದಿದ್ದರೂ ಪೂರ್ವಜರ ಗೌರವವನ್ನು ನೆನಿಸಿ ಜನರು ಅವರ ವಂಶಜರಿಗೆ ಸಹ ಅದೇ ಭಕ್ತ್ಯಾದರಗಳನ್ನು ತೋರಿಸುವ ವಾಡಿಕೆಯುಂಟು.

ಬ್ರಹ್ಮಚಾರಿಗಳಾದ ಮಹಿಮಾಶಾಲಿಗಳಿಗೆ ಎಷ್ಟೋ ಜನ ಶಿಷ್ಯರು ಆಗುವರು. ಅವರು ತಮ್ಮ ಶಿಷ್ಯರಲ್ಲಿ ಒಬ್ಬನಿಗಾಗಲೀ ಹೆಚ್ಚು ಜನರಿಗಾ ಗಲೀ ಅನುಗ್ರಹ ಮಾಡಬಹುದು. ಈ ಶಿಷ್ಯರಲ್ಲಿ ಜಾತಿಭೇದವನ್ನಾಗಲೀ ಸ್ತ್ರೀಪುರುಷಭೇದವನ್ನಾಗಲೀ ಎಣಿಸುವದು ಸಾಂಪ್ರದಾಯಕ್ಕೆ ವಿರೋ ಧವು. ಸ್ತ್ರೀಶಿಷ್ಯರಿಗೆ ಅನುಗ್ರಹ ಮಾಡಿದ ಉದಾಹರಣೆಗಳು ಸಹ ಲಿಂಗಾ ಯತ ಸಮಾಜದಲ್ಲಿ ಅನೇಕವುಂಟು ಇವರಲ್ಲಿ ಬಸವೇಶ್ವರನ ಕಾಲದಿಂ ದಲೂ ಪ್ರಸಿದ್ಧಿ ಪಡೆದ ಮಹಾದೇವಿಯಕ್ಕನು ಒಬ್ಬಳು. ಇತ್ತೀಚಿನ ಒಂದು ಉದಾಹರಣೆಯೆಂದರೆ ಮುಧೋಳ ಸಂಸ್ಥಾನದ ಮಹಾಲಿಂಗಪೂರದ ಅಪ್ಪಮ್ಮನೆಂಬ ಶಿವಭಕ್ತೆಯು. ಈ ಗ್ರಾಮವು ಹುಟ್ಟುವದಕ್ಕಿಂತ ಮೊದಲು ಇದರ ಸ್ಥಳವು ಮಹಾಲಿಂಗಸ್ವಾಮಿಗಳೆಂಬ ಮಹಿಮಾಶಾಲಿಗಳಾದ ಯತಿ ಗಳಿಗೆ ದಾನವಾಗಿ ದೊರೆಯಿತು. ಇವರ ಗದ್ದುಗೆಯು ಈಗ್ಗೆ ಆ ಗ್ರಾಮದ ಲ್ಲಿರುವ ಅವರ ಹೆಸರಿನ ಮಠದಲ್ಲಿರುವುದು. ಇವರು ಸಮಾಧಿಸ್ಥರಾಗುವ ಮುಂಚೆ ತಮ್ಮ ಶಿಷ್ಯಳಾದ ಅಪ್ಪಮ್ಮಳಿಗೆ ಇವರು ಅನುಗ್ರಹ ಮಾಡಿದರು. ಮಹಾಲಿಂಗಸ್ವಾಮಿಗಳ ತರುವಾಯ ಅವರಿಗೆ ತೋರಿಸಿದ ಭಕ್ತ್ಯಾದರ ಗಳನ್ನು ಜನರು ಅಪ್ಪಮ್ಮನಿಗೆ ತೋರಿಸುವದಲ್ಲದೆ ಅವಳ ಚರಣಪ್ರಸಾದ ವನ್ನು ಸಹ ಸೇವಿಸುತ್ತಿದ್ದರೆಂದು ಆ ಗ್ರಾಮದ ಜನರು ಪರಂಪರಾಗತ ವರ್ತಮಾನವನ್ನು ಈಗಲೂ ಹೇಳುತ್ತಾರೆ ಅಪ್ಪಮ್ಮನ ಸಮಾಧಿಯು ಸಹ ಅಲ್ಲಿಯ ಮಠದ ಆವಾರದಲ್ಲಿದೆ. ಅದರ ಮೇಲೆ ಆಕೆಯ ಸುಂದರವಾದ ಶಿಲಾಮೂರ್ತಿಯಿದ್ದು ಅದರ ನಿತ್ಯಪೂಜೆಯು ನಡೆದಿರುವುದು. ಆಕೆಯ

ನಂತರ ಈಗಿರುವ ಸ್ವಾಮಿಗಳವರೆಗೆ ಆರು ತಲೆಗಳಾದವು. ಈ ಮಠದ ಸ್ವಾಮಿಗಳಿಗೆ ರೈತೋಪಯೋಗೀ ಸೇವಕರಾದ ಮಠದಯ್ಯ, ಮಠಪತಿ, ಗಣಾಚಾರ್ಯ, ಗಣಕುಮಾರ ಮತ್ತು ಸ್ಥಾವರಿಕ ಎಂಬ ಐದು ವೃತ್ತ್ಯಾಚಾರ್ಯ ಹಕ್ಕುಗಳು ಮೊದಲಿನಿಂದಲೂ ಈ ವರೆಗೆ ನಡೆಯುತ್ತ ಬಂದಿವೆಯೆಂಬದನ್ನು ಇಲ್ಲಿ ಹೇಳಿದರೆ ಅಪ್ರಸ್ತುತವಾಗಲಾರದು ಈಗ್ಗೆ ಈ ಮಠವು ಪುರಗೀಶಮಯಕ್ಕೆ ಹೊಂದಿದೆ ಬೆಳಗಾಂವ ಜಿಲ್ಹೆಯ ಗೋಕಾಂವಿ ತಾಲೂಕಿನಲ್ಲಿರುವ ಅಂಕಲಗಿಯ ಶ್ರೀ ಅಡವೀಸ್ವಾಮಿಗಳ ಮಠದ ಹೊರತಾಗಿ ಯಾವ ಮಠವೂ ವಿರಕ್ತರಿಗೆ ಅಧೀನವಾಗಿ ಒಂದು ಸಮಯಕ್ಕೆ ಸೇರದೆ ಉಳಿದಿರುವಂತೆ ಈಗ್ಗೆ ಕಂಡುಬರುವದಿಲ್ಲ ಈ ಸಮಯಭೇದವು ಭಕ್ತರ ಜಂಗಮರಗಳಲ್ಲಿರುವ ಭೇದಕ್ಕಿಂತ ತೀಕ್ಷ್ಣತರವಾಗಿದ್ದು ಒಳಗಿಂದೊಳಗೆ ಇಡೀ ಸಮಾಜವನ್ನೇ ಸುಡುತ್ತಿರುವುದು. ಈ ವಿರಕ್ತರು (ಜಂಗಮರು) ತಾವು ಪ್ರಭುಸಾಂಪ್ರದಾಯಿಕರೆಂದು ಹೇಳಿಕೊಳ್ಳುವದು ಸರಿಯಷ್ಟೇ. ಪ್ರಭುದೇವನ ದಿವ್ಯಚರಿತ್ರೆಯು ಎಷ್ಟೋ ಕನ್ನಡ ಗ್ರಂಥಗಳಲ್ಲಿ ವರ್ಣಿತವಾಗಿರುವದಲ್ಲದೆ ತೆಲಗು ತಮಿಳು ಭಾಷೆಗಳಲ್ಲಿ ಸಹ ಪ್ರಸಾರವಾಗಿರುವುದು. ಇವನು ಚರಜಂಗಮರೂಪದಿಂದ ಸಂಚರಿಸಿ ದೇಶವನ್ನು ಪಾವನಗೊಳಿಸಿ ಕಲ್ಯಾಣದಲ್ಲಿ ಬಸವೇಶ್ವರನು ರಚಿಸಿದ ಶೂನ್ಯಸಿಂಹಾಸನವನ್ನು ಪರಜಂಗಮರೂಪದಿಂದ ಏರಿದನು. ಸ್ವಯ, ಚರ, ಪರ ಎಂಬವು ಜಂಗಮನ ಮೂರು ಅವಸ್ಥೆಗಳು. ಇವುಗಳ ಲಕ್ಷಣಗಳನ್ನು ಲೇಖಕರು ವಿಸ್ತಾರವಾಗಿ ತಮ್ಮ ಗ್ರಂಥದಲ್ಲಿ ಕೊಟ್ಟಿರುವರು ಈ ಲಕ್ಷಣಗಳು ಸಹ ಈ ವಿರಕ್ತರಾದ ಜಂಗಮರ ಕಾರ್ಯವು ಈ ಜಗತ್ತಿನಲ್ಲಿ ಮುಖ್ಯವಾಗಿ ಸಮಾಜೋದ್ಧಾರವೇ ಆಗಿರುವುದೆಂದು ಹೇಳುತ್ತವೆ. ಆದರೆ ಈಗಿನ ಎಷ್ಟೋ ವಿರಕ್ತರ ಸ್ಥಿತಿ ಆಚಾರವಿಚಾರಗಳು ಇದಕ್ಕೆ ತೀರ ವಿಪರೀತವಾಗಿ ಅವರ ಪ್ರಥಮಗುರುವಾದ ಪ್ರಭುದೇವನ ಹೆಸರಿಗೆ ಕಲಂಕವನ್ನು ಹಚ್ಚುವಂಥವು ಇರುತ್ತವೆ. ಇವರ ಮಠಗಳಲ್ಲಿ ಎಷ್ಟೋ ಮಠಗಳ ಉತ್ಪನ್ನವು ವರ್ಷಕ್ಕೆ ಸಾವಿರಗಟ್ಲೆ ರೂಪಾಯಿಗಳದ್ದಿರುವುದು ಇವರಿಗೆ ರಾಜರಂತೆ ಆನೆ ಅಂಬಾರಿಗಳ ವೈಭವವೂ ಬೇಕು ಹೀಗಿದ್ದರೂ ಇವರು ಸಮಾಜೋದ್ಧಾರವನ್ನೇ ತಮ್ಮ ಧ್ಯೇಯವನ್ನಾಗಿಟ್ಟುಕೊಂಡು ಆಚರಿಸಿದರೆ ಇವರ ವೈಭವವು ಸಹ ಸಂತೋಷದಾಯಕವೇ. ಆದರೆ ಇವರು ತಮ್ಮಲ್ಲಿರುವ ಸಮಯಭೇದಭಾವದಿಂದಲೂ ವ್ಯಕ್ತಿವ್ಯಕ್ತಿಗಳೊಳಗಿನ ಈರ್ಷ್ಯಾಸೂಯೆಗಳಿಂದಲೂ ಪ್ರೇರಿತ

ರಾಗಿ ತಮ್ಮ ಗೌರವವನ್ನು ಬೆಳೆಸುವದರಲ್ಲಿಯೇ ತೊಡಗಿರುವದರಿಂದ ಸಮಾಜಕ್ಕೆ ಈಗಿನ ದುರ್ದಶೆಯು ಪ್ರಾಪ್ತವಾಗಿರುವುದು. ಬೇರೆ ಬೇರೆ ಸಮಯದವರ ಸಂಕ್ತಿಯು ಸಹ ಕೂಡಿ ಆಗುವದಿಲ್ಲೆಂದ ಮೇಲೆ ಏನನ್ನ ಬೇಕು? ಪ್ರತಿಯೊಂದು ದೊಡ್ಡ ಹಳ್ಳಿಯಲ್ಲಿಯೂ ಪಟ್ಟಣಗಳಲ್ಲಿಯೂ ಕೂಡಿ ಇವರ ಮಠಗಳು ಸಾವಿರಾರು ಉಂಟು. ಇವರಲ್ಲಿ ಕೆಲವರು ಆಚಾರಸಂಪನ್ನರಿಲ್ಲವೆಂತಲ್ಲ ಆದರೆ ಇಂಥವರನ್ನು ಕೇಳುವವರಾರು? ಬಹುಜನರ ಸ್ಥಿತಿಯು ಮೇಲೆ ವರ್ಣಿಸಿದಂತೆ ಇರುವುದು. ಇವರು ತಮ್ಮ ದುರಭಿಮಾನವನ್ನು ಬಿಟ್ಟು ಕ್ರಿಶ್ಚನ್ ಮಿಶನರಿಗಳಂತೆ ಕಾರ್ಯಪ್ರವೃತ್ತರಾದರೆ ಕಣ್ಣು ಮುಚ್ಚಿ ತೆರೆಯುವದರೊಳಗೆ ಸಮಾಜದ ಸ್ಥಿತಿಯು ಪೂರ್ಣವಾಗಿ ಬದಲಾಗುವದು. ಭಕ್ತರಲ್ಲಿ ಪಂಗಡಗಳು ಮಿತಿಮೀರಿ ಬೆಳೆದಿವೆ ಗುರುವರ್ಗದವರಲ್ಲಿ ಎಷ್ಟೋ ಜನರು ಹಾದಿ ಬಿಟ್ಟು ನಡೆಯ ಹತ್ತಿದ್ದಾರೆ. ಪರಮತಗಳಲ್ಲಿಯು ಅಷ್ಟರು ಈ ಸಂಧಿಯನ್ನೇ ನೋಡಿ ತಮ್ಮ ದುರುದ್ದೇಶವನ್ನು ಸಾಧಿಸಹತ್ತಿದ್ದಾರೆ. ಇಂಥ ಕಾಲದಲ್ಲಿ ನಮ್ಮ ಸಮಾಜಕ್ಕೆ ಸರಿಯಾದ ದಾರಿಯನ್ನು ತೋರಿಸುವದು ನಮ್ಮಲ್ಲಿಯ ವಿರಕ್ತವರ್ಗದವರಿಗಲ್ಲದೆ ಬೇರೆಯವರಿಗೆ ಶಕ್ಯವಿಲ್ಲ. ಆದುದರಿಂದ ನಾನು ಅವರಿಗೆ ಶಿರಸಾ ವಂದಿಸಿ ಬೇಡಿಕೊಳ್ಳುವುದೇನಂದರೆ :— ' ಈಗಲಾದರೂ ಎಚ್ಚತ್ತು ಸಮಾಜವನ್ನು ಮೇಲಕ್ಕೆತ್ತಿರಿ; ನೀವು ಪರಮಾತ್ಮನ ಸ್ವರೂಪಿಗಳಾಗಿರುವದನ್ನು ನೆನಪಿಗೆ ತಂದು ಇಡೀ ಲೋಕಕ್ಕೆ ತ ಸ್ವರೂಪವನ್ನು ತಂದುಕೊಡಿರಿ; ನಿಜವಾಗಿ ಶ್ರೀ ಪ್ರಭುದೇವನ ಸಾಂಪ್ರದಾಯಿಕರೆಂದು ಜಗತ್ತಿಗೆ ತೋರಿಸಿರಿ ''

[illegible]ನೆಯ ಪ್ರಕರಣದಲ್ಲಿ ಲೇಖಕರು ತಮ್ಮ ವಂಶದ ಮೂಲಪುರುಷನಾದ ಚನ್ನಪ್ಪದೇವನ ಮತ್ತು ಆ ವಂಶದಲ್ಲಿ ಪ್ರಸಿದ್ಧಪಡೆದ ಕೆಲವು ಜನರ ಚರಿತ್ರೆಯನ್ನು ಸಂಕ್ಷೇಪವಾಗಿ ಕೊಟ್ಟು ಪ್ರಭುದೇವನ ಗದ್ದಿಗೆಯು ಪೂಜೆಯು ಚನ್ನಪ್ಪದೇವನ ಕಾಲದಿಂದ ಇಲ್ಲಿಯವರೆಗೆ ಅವನ ವಂಶದಲ್ಲಿ ಅವ್ಯಾಹತವಾಗಿ ನಡೆಯುತ್ತ ಬಂದಿದೆಯೆಂಬವನ್ನು ಹೇಳಿರುವರು

ಇವರು ಈ ಗ್ರಂಥದಲ್ಲಿಯ ತಮ್ಮ ಅಭಿಪ್ರಾಯಗಳನ್ನು ಸ್ಥಿರಪಡಿಸಲಿಕೆ ಅನೇಕ ಧಾರ್ಮಿಕ, ಐತಿಹಾಸಿಕ ಆಧಿಭೌತಿಕ, ಯೌಗಿಕ ಮುಂತಾದ ಆಧಾರಗಳನ್ನು ಕೊಟ್ಟು ಎಷ್ಟೋ ಗ್ರಂಥಗಳ ಅವತರಣಿಕೆಗಳನ್ನು ಸಹ ವಿಸ್ತಾರವಾಗಿ ಉಲ್ಲೇಖಿಸಿರುವರು. ಇದರ ಮೇಲಿಂದ ಇವರ ವಿದ್ವ

ಸ್ತ್ರೀಯು, ಉದ್ಯೋಗವು ಮತ್ತು ವಾಚನವಿಸ್ತಾರವು ಎಷ್ಟಿದೆಯೆಂಬುವು ಈ ಗ್ರಂಥವನ್ನು ಓದುವವರಿಗೆ ಸಹಜವಾಗಿ ಕಂಡು ಬರುವುವು. ಈ ಗ್ರಂಥವನ್ನು ಎಲ್ಲರೂ ನಿರ್ಮಲಾಂತಃಕರಣದಿಂದ ಓದಿ ಅದರ ಉಪಯೋಗವನ್ನು ಮಾಡಿಕೊಳ್ಳುವರೆಂದು ಹಾರೈಸುತ್ತೇನೆ.

ಧಾರವಾಡ,
ತಾ. [illegible] } ವೀರಭದ್ರಪ್ಪಾ [illegible] [illegible]ಲಭಾವಿ



ಶ್ರೀ॥ ಬುದ್ಧಯ್ಯಾ ಮಗೆಯ್ಯಾಸ್ವಾಮಿ ಪುರಾಣಿಕ

# ಬರೆದವನ ಬಿನ್ನಹ



ತೇರದಾಳದಲ್ಲಿ ಶ್ರೀಮನ್ನಿರಂಜನ ಜಗದ್ಗುರು ಶ್ರೀಮದನಾದಿ ಅಲ್ಲಮ ಪ್ರಭುದೇವರದೊಂದು ವಿಶಾಲ, ಸುಂದರ ಹಾಗೂ ಪ್ರಾಚೀನವಾದ ಬೃಹನ್ಮಠ ಉಂಟು. ಅದರಲ್ಲಿ ಶ್ರೀಗಳವರ ಶೂನ್ಯಸಿಂಹಾಸನವೆಂಬ ಗದ್ದುಗೆ ಇರುವದು. ಆ ಜಗದ್ಗುರು ಪೀಠಕ್ಕೆ ಅನಾದಿಯಿಂದ ಅನೇಕ ರಾಜಮಹಾರಾಜರು ಇನಾಮು ಕೊಟ್ಟ ಭೂದಾನಗಳು ಈಗ್ಯೂ ನಡೆಯುತ್ತಿರುವವು ಈ ಭೂಮಿಗಳ ಕ್ಷೇತ್ರವು ಸುಮಾರು ಒಂದು ಸಾವಿರ ಎಕರೆ ಇರುವದು. ಇವುಗಳಲ್ಲಿ ಸುಮಾರು ನಾಲ್ಕುನೂರು ಎಕರೆ ಭೂಮಿಯು ಈ ಬೃಹನ್ಮಠದ ಪೂರ್ಣ ಮಾಲಿಕರಾದ ಶ್ರೀ ಮುತ್ಯಾಚನ್ನಪ್ಪದೇವನ ವಂಶಜರ ಎಂಟು ಶಾಖೆಯವರಿಗೆ ಇನಾಮುವಾಗಿ ನಡೆದಿರುವದು. ಇವರು ಈ ಶೂನ್ಯಸಿಂಹಾಸನದ ತ್ರಿಕಾಲ ಪೂಜೆಯನ್ನು ವಿಧಿಯುಕ್ತವಾಗಿ ನಡೆಸುವದಲ್ಲದೆ ಅದರ ಅನೇಕ ಉತ್ಸವಗಳನ್ನು ನಡೆಸುತ್ತ ಬಂದಿರುವರು. ಉಳಿದ ಸುಮಾರು ಆರುನೂರು ಎಕರೆ ಭೂಮಿಯು ಜಗದ್ಗುರುಪೀಠದ ಕೆಲವು ಸೇವಕರಿಗೆ ಇನಾಮುವಾಗಿ ನಡೆದಿರುವವು. ಇದು ಅಲ್ಲದೆ ಅನೇಕ ಭಕ್ತಜನರು ಭಕ್ತಿಯಿಂದ ಉತ್ಸವಗಳಲ್ಲಿ ಬಂದು ಶ್ರೀಗಳವರ ಪೀಠದ ಸೇವೆಯನ್ನು ಮಾಡುತ್ತಿರುವರು. ಶ್ರಾವಣಮಾಸ, ಕಾರ್ತಿಕ, ಸಂಕ್ರಮಣ, ಮಹಾಶಿವರಾತ್ರಿ ಮುಂತಾದ ಪರ್ವದಿವಸಗಳಲ್ಲಿ ಉತ್ಸವಗಳು ನಡೆಯುತ್ತಿರುವದಲ್ಲದೆ ಶ್ರಾವಣ ಕಡೆಯ ಸೋಮವಾರ ದಿವಸ ದೊಡ್ಡ ಜಾತ್ರೆಯಾಗುವದು. ಜಾತ್ರೆಗೆ ಸುಮಾರು ಹತ್ತುಸಾವಿರಗಿಂತಲೂ ಮೇಲ್ಪಟ್ಟು ಭಕ್ತಜನರು ಕೂಡುವರು.

ಉತ್ಸವಗಳಲ್ಲಿ ಶ್ರೀಗಳವರ ಪೀಠದ ಸೇವೆ ಮಾಡುವ ಸೇವಕರ ವಿವರವು :— ಕಾವಡ್ಯಾ ಎಂಬ ನೀರಿನ ಆಳು, ಕಾಲಮಾನಕ್ಕೆ ಸರಿಯಾಗಿ ನೀರನ್ನು ಕಾಸಿ ಇಲ್ಲವೆ ಸೋಸಿ ಕೊಡುವ ಆಳು, ನೀರನ್ನು ಕಾಸಲಿಕ್ಕೆ ಕಟ್ಟಿಗೆಗಳನ್ನು ತರುವ ಆಳು, ರಾಜಾಂಗಳ ಉಡುಗುವ ಆಳು, ಪತ್ರಿಗಳನ್ನು ತರುವ ಆಳು. ಹೂವು ತರುವ ಆಳು, ಉತ್ಸವಗಳಲ್ಲಿ ಧೂಪಾರತಿ ಹಾಗೂ ಘಂಟೆ ಹಿಡಿಯುವವ, ಶಂಬಾಳ ಬಾರಿಸುವವರು ಇಬ್ಬರು, ಕಾಳೆ

ಪುಸ್ತು ಊದುವವ, ಹಿಂದೆ ಮುಂದೆ ಇಬ್ಬರಂತೆ ನಾಲ್ಕು ಜನ ಪಲ್ಲಕ್ಕಿ ಹೊರುವವರು, ಇಬ್ಬರು ದೀವಟಿಗೆಗಳನ್ನು ಹಿಡಿಯುವವರು, ಮೂವರು ಪಂಜಿಕೋಲುಗಳನ್ನು ಹಿಡಿಯುವವರು, ಆಪ್ತಾಗಿರಿಗಳನ್ನು ಹಿಡಿಯುವವರು ನಾಲ್ಕು ಜನ, ಗಸೆಯ ಮೇಳಕ್ಕೆ ಮೂವರು. ಸನಿಯ ಮೇಳಕ್ಕೆ ಮೂವರು ಹೀಗೆ ಎರಡು ವಾದ್ಯದ ಮೇಳದವರು ಆರು ಜನರು, ಭೃಂಗಿ ಶೀವ ಕರನ್ನು ಕರೆಯುವ ದಾವುರನೆಂಬ ಆತನು. ಬೃಹನ್ಮಠದ ಪುದ್ದೇವಾರನೆಂಬ ಕಾರಭಾರಿಯು, ತಾಸೇದವರು ಮೂರು ಮಂದಿ ಮತ್ತು ಸನಾದಿ ಊದುವವರು ಇಬ್ಬರು ಹೀಗೆ ಐದು ಮಂದಿ ಬಜಂತ್ರಿಯವರು, ನಗಾರಿಯವನು. ಚೌಘಡೆ ಬಾರಿಸುವವರು ಇಬ್ಬರು. ಅವರ ಸಂಗಡ ಸನಾದಿ ಊದುವವರು ಇಬ್ಬರು ಹೀಗೆ ನಾಲ್ಕು ಮಂದಿ, ಉಗ್ರಾಣದವನ, ಜಡಾಸು ಡೇರಾಲುಗಳನ್ನು ಹಾಕಿಸುವವರು ನಾಲ್ಕು ಮಂದಿ, ಚಾಮರಗಳನ್ನು ಬೀಸುವವರು ನಾಲ್ಕು ಜನ, ಕೊಂಬುಗಳನ್ನು ಊದುವವರು ಇಬ್ಬರು, ಕಾರ್ತೀಕವನ್ನು ಹಚ್ಚುವವ ಈಟಿಗಳನ್ನು ಹಿಡಿಯುವವರು ಇಬ್ಬರು. ಹಡದಿಗಳನ್ನು ಹಾಕುವವ, ಅಗಸ, ಸಿಂಪಿಗ ಮೇಹಾತ, ಕುಂಬಾರ, ಶಾಸ್ತ್ರಿ ಹೀಗೆ ಒಟ್ಟು ೬೩ ಜನ ಸೇವಕರಿರುವರು.

ಅಂತ್ಯಜರು ಮೊದಲುಗೊಂಡು ಉತ್ತಮರು ಕಡೆಯಾಗಿ ಅನೇಕ ಜಾತಿಯ ಭಕ್ತಜನರು ದೂರ ದೇಶಗಳಿಂದ ಬಂದು ದರ್ಶನಾಶೀರ್ವಾದಗಳನ್ನು ಪಡೆದು ಹೋಗುವುದನ್ನು ಚಿಕ್ಕಂದಿನಿಂದಲೂ ನಾನು ಕಾಣುತ್ತಿದ್ದೆನು. ನನ್ನ ಮಾವಂದಿರಾದ ಶ್ರೀ ವಿರೂಪಾಕ್ಷಯ್ಯನವರು ಗುಂಡಗಲ್ಮಠದವರು, ಇವರು "ಶಿವ ಶಿವ ಶಿವ ಶಿವ ಲಿಂಗ । ದಯಪಾಲಿಸೋ ಗುರು ಪ್ರಭುಲಿಂಗ" ಎಂದು ಒಂದು ೧೦ ನುಡಿಗಳುಳ್ಳ ಭಜನೀ ಪದವನ್ನು ಮಾಡಿದ್ದರು. ಅವರಲ್ಲಿ ಕಾಶಿ, ಕೇದಾರ, ರಾಮೇಶ್ವರ, ಉಜ್ಜಯಿನಿ, ಕೊಲ್ಲಿಪಾಕಿ, ಶ್ರೀಶೈಲ ಮೊದಲಾದ ಪುಣ್ಯಕ್ಷೇತ್ರಗಳ ವರ್ಣನೆಯನ್ನು ಮಾಡಿ ಕಡೆಯ ನುಡಿಯಲ್ಲಿ "ಎಲ್ಲ ಕ್ಷೇತ್ರದೊಳು ಬಲ್ಲಿದ ತೇರದಾಳ । ಅಲ್ಲಮಪ್ರಭು ಮಹಾಲಿಂಗ ॥" ಎಂದು ಅವರು ಹಾಡಿರುವದನ್ನು ಕೇಳಿ ನನಗೆ ತೇರದಾಳ ಸ್ಥಾನವು ಭರತಖಂಡದೊಳಗಿನ ಎಲ್ಲ ಪುಣ್ಯ ಕ್ಷೇತ್ರಗಳಲ್ಲಿ ಮಿಗಿಲಾದದ್ದೆಂದು ಅನಿಸಿತು. ಆದರೆ ಮೇಲೆ ಹೇಳಿದ ಕಾಶಿ ಮೊದಲಾದ ಸ್ಥಾನಗಳಲ್ಲಿ ಪ್ರಾಣಪ್ರತಿಷ್ಠಾಪನೆಯನ್ನು ಹೊಂದಿದ ಸ್ಥಾವರಲಿಂಗಗಳು ಇದ್ದಂತೆ ತೇರದಾಳ ಬೃಹನ್ಮಠದಲ್ಲಿ ಆ ತೆರದ ಲಿಂಗವೂ ಇಲ್ಲವೆ ಬೇರೆ ವಿಗ್ರ

ಹೆಸ್ರೂ ಇಲ್ಲದ್ದು ಕಂಡು ಕುತೂಹಲವುಂಟಾಗಿ ಇದು ಒಬ್ಬ ಸಿದ್ಧಪುರುಷನ ಸಮಾಧಿಸ್ಥಾನವಿರಬೇಕೆಂದು ಬಗೆದು ಹೆಚ್ಚಿನ ಶೋಧನೆಯನ್ನು ಮಾಡ ತೊಡಗಿದೆನು. ಬೃಹನ್ಮಠದೊಳಗೆ ಉಪಯೋಗಿಸುವ ದೀಪಾರಾಧನೆ, ಮಡಿಸೀರು ಅಯ್ಯನ ಎಡೆ ಮೊದಲಾದ ಶಬ್ದಗಳನ್ನು ಕೇಳುವವರಿಂದಲೂ ಹಾಗು ಮಠದ ಜಂಗಮರು ' ಸೃಷ್ಟಿಯೊಳಗೆ ತೀರ್ಥಯಾತ್ರೆ । ನಷ್ಟ ಪಟ್ಟು ಬಳಲುದೇಕೆ । ಅಷ್ಟಕೋಟಿ ಗಂಗೆಗಳು । ಅಂಗುಷ್ಟದಲ್ಲಿ ತೋರುತಿದ್ದೆ ॥ ' ಎಂದು ಹಾಡುವ ಪದ್ಯದ ಮೇಲಿಂದಲೂ ಪದೇ ಪದೇ ಅಥಣಿಯ ಶಿವಯೋಗಿಗಳಾದ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಶ್ರೀ ಮುರುಘೇಂದ್ರ ಸ್ವಾಮಿಗಳು ಹಾಗೂ ಬೀಳೂರ ಶ್ರೀ ಗುರುಬಸವಸ್ವಾಮಿಗಳು ಮೊದಲಾದ ಅನೇಕ ನಿರಂಜನ ಮೂರ್ತಿಗಳು ಹಾಗು ಪಟ್ಟಾಧಿಕಾರಿಗಳು ಬಂದು ದರ್ಶನಾಶೀರ್ವಾದ ಮಾಡಿಕೊಂಡು ಹೋಗುವದರಿಂದಲೂ ಮತ್ತು ತಪೋನಿಷ್ಠರೂ, ಅನಂತಮೂರ್ತಿಗಳೂ ಮತ್ತು ಶ್ರೀ ಶಿವಯೋಗಮಂದಿರದ ಪ್ರಸ್ತುತ ಕಮೀಟಿಯ ಅಧ್ಯಕ್ಷರಾದ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಹುಕ್ಕೇರಿಮಠದ ಶ್ರೀ ಶಿವಬಸವ ಮಹಾಸ್ವಾಮಿಗಳನ್ನು ಮರಿದೇವರನ್ನಾಗಿ ಬಿಡುವ ಕಾಲಕ್ಕೆ ತೇರದಾಳ ಬೃಹನ್ಮಠಕ್ಕೆ ಅವರನ್ನು ತಂದು ಜಗದ್ಗುರುಪೀಠದ ಸನ್ನಿಧಿಯಲ್ಲಿ ಅವರಿಗೆ ಕಪನಿಯನ್ನು ಹಾಕಿಸಿಕೊಂಡು ಹೋದದ್ದು ನೋಡಿದವರು ಈಗ್ಗೂ ಹೇಳುವದಲ್ಲದೆ ಆ ಸ್ವಾಮಿಗಳೂ ತಾವೇ ಅದನ್ನು ಹೇಳುವದರಿಂದಲೂ ಇದೊಂದು ನಿರಂಜನ ಮೂರ್ತಿಯ ಗದ್ದುಗೆ ಇರುವದೆಂದು ಮನವರಿಕೆಯಾಗಿ ಮಠದ ಜಂಗಮರು ಹಾಡುವ ಪದ್ಯಗಳನ್ನು ಕೂಡಹಾಕಬೇಕೆಂದು ಯೋಚಿಸಿದೆನು. ಮುಗಿಯ ನರೇಂದ್ರ, ಚನ್ನ ಶ್ರೀ ಪ್ರಭು ಗುರುಬಸವ ಎಂಬ ಮೂವರು ಕವಿಗಳಲ್ಲಿ ಪ್ರತಿಯೊಬ್ಬರು ಹನ್ನೊಂದುನೂರು ಪದ್ಯಗಳಿಂದ ಈ ಸ್ಥಾನವನ್ನು ಕುರಿತು ಹಾಡಿರುವರೆಂದು ಗೊತ್ತಾಯಿತು. ಇದರಂತೆ ಶೋಧ ಮಾಡಲಾಗಿ ಮೊದಲು ೭೬ ಪದ್ಯಗಳು ದೊರತವು. ಇವುಗಳನ್ನು ಮೇಲಿಂದ ಮೇಲೆ ಓದಲಾಗಿ ಈ ಸ್ಥಾನವು ಮಾಯಾಕೋಲಾಹಲನಾದ ಶ್ರೀಮದನಾದಿ ಅಲ್ಲಮಪ್ರಭು ದೇವರ ಜಗದ್ಗುರುಪೀಠವೆಂದು ಮನಸಿನ ನಿರ್ಧಾರವಾಯಿತು.

ಕ್ರಿ. ಶ. ೧೯೫೫ರಲ್ಲಿ ಸದ್ಯದ ಮಾರ್ಗದ ಪೀಠಸ್ಥರಾದ ಶ್ರೀಮನ್ನಿರಂಜನ ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳು ಅಥಣಿಯಿಂದ ತೇರದಾಳಕ್ಕೆ ದಯಮಾಡಿಸಿ ಅಲ್ಲಿ ಕೆಲವು ದಿವಸಗಳವರೆಗೆ ಇದ್ದಾಗ್ಗೆ

ಅವರು ಶ್ರೀ ಅಲ್ಲಮಪ್ರಭುದೇವರ ಗದ್ದುಗೆಯ ದರ್ಶನದ ಬಯಕೆಯನ್ನು ನನ್ನ ಮುಂದೆ ತಿಳಿಸಿದರು. ಅದನ್ನು ನೆರವೇರಿಸಬೇಕೆಂದು ಊರ ಪ್ರಮುಖರಿಗೆ ಕೇಳಲು ಈ ಸ್ವಾಮಿಗಳು ತಮ್ಮ ಮುತ್ತ್ಯಾಗುರುಗಳಾದ ಶ್ರೀ ಮಹಾಲಿಂಗಸ್ವಾಮಿಗಳಂತೆ ಮಡಿಯಿಂದ ಪಾದಚಾರಿಗಳಾಗಿ ಬಂದು ದರ್ಶನಾಶೀರ್ವಾದಗಳನ್ನು ಪಡೆಯಬೇಕೆಂದು ಬಿನ್ನೈಸಿಕೊಂಡರು. ಈ ಮಾತಿಗೆ ದುರ್ಗದ ಶ್ರೀಗಳವರು ಒಪ್ಪಿ ಬೃಹನ್ಮಠಕ್ಕೆ ಬಂದು ಪೂರ್ವಪದ್ಧತಿಯಂತೆ ಕಾಣಿಕೆಗಳನ್ನು ಕೊಟ್ಟು ದರ್ಶನಾಶೀರ್ವಾದಗಳನ್ನು ಪಡೆದುಕೊಂಡು ಹೋದರು. ಇದನ್ನು ನೋಡಿ ನನ್ನ ಶೋಧವು ಕೊನೆಗೊಂಡಿತು.

ತೇರದಾಳದಲ್ಲಿ ಅಶಿಕ್ಷಿತರಾದ ಒಬ್ಬಿಬ್ಬ ಸ್ವಾರ್ಥಿ ಹಾಗೂ ವಿಘ್ನಸಂತೋಷಿ ಜನರು ಗುರುಸ್ಥಲದವರನ್ನು ಎತ್ತಿ ಹಿಡಿದು ನಿರಂಜನ ಮೂರ್ತಿಗಳ ವಿರುದ್ಧವಾಗಿ ಚಳವಳಿಯನ್ನು ಹಬ್ಬಿಸಿದರೆ ಬೃಹನ್ಮಠದ ವರ್ಚಸ್ಸು ಕಡಿಮೆಯಾಗಿ ತಮ್ಮ ಪ್ರತಿಷ್ಠೆಯು ಬೆಳೆಯಬಹುದೆಂದು ಹವಣಿಸಿ ಗುಪ್ತವಾಗಿ ಪ್ರಯತ್ನ ನಡೆಸಿದರು. ಇದನ್ನರಿತು ನಾನು ಕ್ರಿ. ಶ ೧೯೨೯ರಲ್ಲಿ ಪುಣೆಯ ಪ್ರಸಿದ್ಧ ಮರಾಠಿ ಲೇಖಕರೂ ಭಾರತಇತಿಹಾಸಸಂಶೋಧಕ ಮಂಡಳದ ಆಜೀವಸಭಾಸದರೂ ಆಗ್ಗೆ "ಚಿತ್ರಮಯಜಗತ್" ಎಂಬ ಮಾಸಪತ್ರಿಕೆಯ ಉಪಸಂಪಾದಕರೂ ಹಾಗೂ ಸದ್ಯಕ್ಕೆ ಆನಂದಾಶ್ರಮದ ವ್ಯವಸ್ಥಾಪಕರೂ ಆದ ಶ್ರೀಯುತ ದತ್ತಾತ್ರಯ ವಾಮನ ಆಪ್ಟೆ ಎಂಬವರ ಅಧ್ಯಕ್ಷತೆಯಲ್ಲಿ ಬೃಹನ್ಮಠದಲ್ಲಿ ದೊಡ್ಡ ಸಭೆಗೂಡಿಸಿ ಈ ಜಗದ್ಗುರುಪೀಠದ ಬಗ್ಗೆ ಸಾಧಾರಣವಾದ ಒಂದು ನಿಬಂಧವನ್ನು ಓದಿದೆನು. ಅದನ್ನು ಕೇಳಿ ಅಧ್ಯಕ್ಷಮಹಾಶಯರು ಈ ವಿಷಯವಾಗಿ ಒಂದು ಪುಸ್ತಕವನ್ನು ಬರೆದರೆ ಒಳಿತಾಗುವದೆಂದು ಹೇಳಿದರು. ಅದರ ಸಲುವಾಗಿ ತೇರದಾಳ ಬೃಹನ್ಮಠದ ಬಗ್ಗೆ ಐತಿಹಾಸಿಕ ದೃಷ್ಟಿಯಿಂದ ಮರಾಠಿಯಲ್ಲಿ ಪುಸ್ತಕವನ್ನು ಕ್ರಿ. ಶ ೧೯೩೨ರಲ್ಲಿ ಬರೆದು ಅದನ್ನು ಅನೇಕ ವಿದ್ವಾಂಸರಿಗೆ ಓದಿ ತೋರಿಸಿದೆನು.

ಈ ಗ್ರಂಥವನ್ನು ಅಚ್ಚು ಹಾಕಿಸಬೇಕೆಂಬುವಷ್ಟರಲ್ಲಿ ರಾವಸಾಹೇಬ ಹಳಕಟ್ಟಿಯವರಿಗೆ ನಿರಂಜನವಂಶರತ್ನಾಕರವೆಂಬುದೊಂದು ಪುಸ್ತಕವು ದೊರೆಯಿತು. ಅದರಲ್ಲಿ ತೇರದಾಳ ಬೃಹನ್ಮಠದ ವಿಷಯವಾಗಿ ಕೆಲವು ಸಂಗತಿಗಳು ಇದ್ದವು. ಅವನ್ನು ನೋಡಿ ಬೃಹನ್ಮಠದ ಸನದು ಸೂತ್ರಗಳನ್ನು ಹುಡುಕಿಸಿ ಮತ್ತು ದುರ್ಗದ ಶ್ರೀ ಮಹಾಸ್ವಾಮಿಗಳು ಬ್ಯಾಡಗಿಯಲ್ಲಿ

ದಸರೆಯ ಮಹೋತ್ಸವವನ್ನು ಮಾಡಿದಾಗ್ಗೆ ಮುರುಗಿ ಹಾಗ ಕುಮಾರ ಸಮಯಗಳು ಒಂದಾಗಬೇಕಾದರೆ ಮೊದಲಿನ ಪೂರ್ವಪದ್ಧತಿಯಂತೆ ತೇರದಾಳ ಜಗದ್ಗುರು ಪೀಠವನ್ನು ಉಭಯತರು ಮಾನ್ಯಮಾಡಿಕೊಂಡು ಹೋಗಬೇಕೆಂಬ ಮಾತನ್ನು ನನ್ನ ಸಂಗಡ ದುರ್ಗದ ಶ್ರೀಗಳವರಿಗೆ ಕೀರ್ತಿಶೇಷರಾದ ಶ್ರೀಮನ್ನಿರಂಜನ ಹಾನಗಲ್ಲ ಕುಮಾರಮಹಾಸ್ವಾಮಿಗಳು ಹೇಳಿಕಳಿಸಿದ್ದರ ಪ್ರಸ್ತಾಪವು ಹೊರಡದಿದ್ದರೂ ಅದನ್ನು ನೋಡಿ ಮತ್ತು ಗುರುಸ್ಥಲ ಹಾಗು ವಿರಿಂದ ಸ್ಥಲದವರ ಲೇಖಗಳನ್ನು ಮುಂದಿಟ್ಟುಕೊಂಡು ಉಭಯಸ್ಥಲದವರಿಗೂ ಮಾನ್ಯವಾಗುವಂತೆ ಕ್ರಿ. ಶ. ೧೯೨೮ರಲ್ಲಿ ೧೫ ಪ್ರಕರಣಗಳುಳ್ಳ ಒಂದು ಗ್ರಂಥವನ್ನು ಮರಾಠಿಯಲ್ಲಿ ಬರೆದೆನು. ಈ ಗ್ರಂಥವನ್ನು ಪ್ರಕಟಿಸುವ ಪೂರ್ವದಲ್ಲಿ ಇದಕ್ಕೆ ಆಧಾರಭೂತಗಳಾದ ಕೆಲವು ಐತಿಹಾಸಿಕ ಸಂಗತಿಗಳನ್ನು ಪ್ರಸಿದ್ಧಿಸಿದರೆ ಜನರ ಅಭಿಪ್ರಾಯವು ಗೊತ್ತಾಗುವದೆಂದು ತಿಳಿದು ಕ್ರಿ. ಶ. ೧೯೨೯ರಿಂದ ಮೆಹರ್ಬಾನ ಶ್ರೀಮಂತ ಅಪ್ಪಾಸಾಹೇಬ ದೇಸಾಯಿ ಹನಗಂಡಿ ಈ ಧೊರೆಗಳ ಧನಸಹಾಯದಿಂದ "ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆ"ಯ ೧೧ ಪುಷ್ಪಗಳನ್ನು ಪ್ರಕಟಿಸಿ ಅವುಗಳನ್ನು ಅಭಿಪ್ರಾಯಗಳ ಸಲುವಾಗಿ ಕರ್ನಾಟಕದೊಳಗಣ ಅನೇಕ ವಿದ್ವಾಂಸರ ಕಡೆಗೆ ಕಳುಹಿಸಿದೆನು ಅವರು ಇವುಗಳ ವಿಷಯವಾಗಿ ಒಳ್ಳೇ ಅಭಿಪ್ರಾಯವನ್ನು ಕೊಟ್ಟಿರುವರು ಈ ಯಾವತ್ತು ಪುಷ್ಪಗಳಿಗೆ ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದವರ ಕಡೆಯಿಂದ ಬಹುಮಾನಗಳು ದೊರಕಿದವು.

ಇಷ್ಟರಲ್ಲಿ ರಾವಸಾಹೇಬ ಹಳಕಟ್ಟಿಯವರು ಮೊದಲಿನ ೩ ಪುಷ್ಪಗಳನ್ನು ಓದಿ ತೇರದಾಳ ಬೃಹನ್ಮಠದ ವಿಷಯವಾಗಿ ತಮ್ಮ ಅಭಿಪ್ರಾಯವನ್ನು "ಶಿವಾನುಭವ"ದಲ್ಲಿ ವ್ಯಕ್ತಗೊಳಿಸಿದರು. ಅದಕ್ಕೆ ಉತ್ತರವನ್ನು ಧಾರವಾಡದ ಶ್ರೀಯುತ ಹುಂಡೇಕಾರ ವಕೀಲರು "ಶಿವಾನುಭವ"ದ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಿದ್ದಕ್ಕೆ ಹಳಕಟ್ಟಿ ರಾವಸಾಹೇಬರು ಕೆಲವು ಪ್ರಶ್ನೆಗಳನ್ನು ಮಾಡಿದರು. ಇವುಗಳಿಗೆ ಉತ್ತರಕೊಡಲು ಶ್ರೀಯುತ ಹುಂಡೇಕಾರ ವಕೀಲರಿಗೆ 'ಶಿವಾನುಭವ'ದಲ್ಲಿ ಅನುವು ದೊರೆಯಲಿಲ್ಲ ಆದುದರಿಂದ ಈ ಮಾತು ಅಷ್ಟಕ್ಕೆ ಉಳಿಯಿತು. ಮುಂದೆ ಈ ಉಭಯತರ ವಾದದ ರೀತಿಯನ್ನು ಮುಂದಿಟ್ಟುಕೊಂಡು ಬೆಂಗಳೂರಿನ ಶ್ರೀಮಾನ್ ಎಮ್. ಆರ್. ಶ್ರೀನಿವಾಸಮೂರ್ತಿಯವರು ತೇರದಾಳ ಬೃಹನ್ಮಠದ ಬಗ್ಗೆ ತಮ್ಮ ಅಭಿಪ್ರಾಯವನ್ನು ಪ್ರಬುದ್ಧಕರ್ನಾಟಕದಲ್ಲಿ ಪ್ರಸಿದ್ಧಿಸಿದರು. ಮತ್ತು ಅದರ

ಅನುವಾದವನ್ನೇ ಪ್ರಭುಲಿಂಗಲೀಲೆ ಸಂಗ್ರಹದ ಪೀಠಿಕೆಯಲ್ಲಿ ಪುನಃ ಬರೆದರು.

ಇದನ್ನರಿತು ಇನ್ನು ಮುಂದೆ ನಾನು ತೇರದಾಳ ಬೃಹನ್ಮಠದ ಬಗ್ಗೆ ಮರಾಠಿಭಾಷೆಯಲ್ಲಿ ಬರೆದಿರುವ ಗ್ರಂಥವನ್ನು ಕನ್ನಡದಲ್ಲಿ ಪ್ರಸಿದ್ಧಿಸಿದರೆ ಒಳಿತಾಗುವದೆಂದು ಬಗೆದು ಮೊದಲು "ವಿರಕ್ತರಲ್ಲಿಯ ಸಮಯಭೇದದ ಜೊಳ್ಳುತನ" ಎಂಬದೊಂದು ಲೇಖವನ್ನು ಬರೆದು ಅದನ್ನು "ನವಕರ್ನಾಟಕ" ಮತ್ತು "ಶರಣಸಂದೇಶ" (ತಾ ೨೯-೨-೧೯೩೨) ಪತ್ರಗಳಲ್ಲಿ ಪ್ರಕಟಿಸಿದೆನು. ಅದಕ್ಕೆ ಈ ವರೆಗೂ ಯಾರಿಂದಲೂ ಸಮಾಧಾನಕರವಾದ ಉತ್ತರವು ದೊರೆಯಲಿಲ್ಲವು. ಆದರೆ ಶ್ರೀಯುತ ಶಿರಾಳಕೊಪ್ಪದ ಚನ್ನಮಲ್ಲಪ್ಪನವರು ತಮ್ಮ "ಸದ್ಧರ್ಮದೀಪಿಕೆ" ಯಲ್ಲಿ ನಿರಂಜನವಂಶರತ್ನಾಕರದ ೨ನೆಯ ಭಾಗವೆಂದು ಸಮಯಭೇದದ ಕೆಲವು ಸಂಗತಿಗಳನ್ನು ಪ್ರಸಿದ್ಧಮಾಡಹತ್ತಿರುವರು. ಈ ಅಶಾಸ್ತ್ರೀಯವಾದ ಸಮಯಭೇದದಿಂದ ವಿರಕ್ತರಲ್ಲಿ ಉಂಟಾದ ದುರವಸ್ಥೆಯನ್ನು ಕಂಡು ಆಧುನಿಕ ಕೆಲವು ಭಕ್ತರ ಹಾಗು ಜಂಗಮರ ದಾಸೋಹದ ಸ್ಥಳಗಳಲ್ಲಿ ಕೆಲವು ಸ್ಥಾನಿಕ ಭಕ್ತರ ಸಹಾಯದಿಂದ ಗಂಟುಜೋಳಿಗಿ ಪುಸುಬುವನ್ನು ಜಂಗಮರು ಸೇರಿ ಪ್ರಬಲರಾಗಿ ಮನ್ನಣೆಯ ದೆಸೆಯಿಂದ ಇತ್ತೀಚಗೆ ಸುಮಾರು ೫೦ ವರ್ಷಗಳಿಂದ ವಿರಕ್ತರಾಗಿ ವಿರಕ್ತರೊಳಗಿನ ಒಂದು ಸಮಯಭೇದವಕ್ಕೆ ಸೇರಿಕೊಂಡು ಸಂಧಿ ಸಾಧಿಸಿ ತಾವೂ ಜಗದ್ಗುರುಗಳೆಂದು ಹೊಗಳಿಸಿಕೊಳ್ಳ ಹತ್ತಿದರು. ಆದರೆ ತೇರದಾಳದ ಬೃಹನ್ಮಠದ ಜಂಗಮರು ಮಾತ್ರ ತಾವು ಹೀಗೆ ಮಾಡದೆ ಎಲ್ಲ ವಿರಕ್ತರಿಗೆ ಮೂಲಿಗನಾದ ಶ್ರೀಮದನಾದಿ ಅಲ್ಲಮಪ್ರಭುವಿನ ಐಕ್ಯಸ್ಥಾನದ ಪೂಜೆಯನ್ನು ಸೇವ್ಯಸೇವಕಭಾವನೆಯಿಂದ ಮಾಡುತ್ತ ಈ ಹೊತ್ತಿಗೂ ಶರಣಸ್ಥಲದಲ್ಲಿ ನಡಕೊಳುತ್ತ ಬಂದು ಜಗದ್ಗುರುಪೀಠವನ್ನು ಐತಿಹಾಸಿಕ ಕುರುಹೆಂದು ಕಾದಿಟ್ಟದ್ದು ವಿರಕ್ತವರ್ಗದವರ ಮೇಲೆ ಮಹದುಪಕಾರವೆಂದು ತಿಳಿಯತಕ್ಕದ್ದು.

ಇನ್ನು ಈ ವಿರಕ್ತರ ಜಗದ್ಗುರುಪೀಠವು ಈ ಗುರುಸ್ಥಲದ ಜಂಗಮರ ವಶವಲ್ಲಿ ಏಕೆ ಎಂದು ಮತ್ತು ಹೇಗೆ ಬಂತೆಂದು ಕೆಲವರು ಕೇಳಬಹುದು. ಆದರೆ ಅನೇಕ ವಿರಕ್ತಮಠಗಳಲ್ಲಿ ಮೊದಲು ಉಡುಗಿ ಜಾಡಿಸಿಕೊಂಡು ಸೇವಾವೃತ್ತಿಯಲ್ಲಿದ್ದು ಮುಂದೆ ಆ ಮಠದ ಮಾಲಕರಾದವರಂತೆ

ತೇರದಾಳ ಬೃಹನ್ಮಠದ ಜಂಗಮರು ಈ ಮತಕ್ಕೆ ಮೂಲಕರ್ತರಾದವರಲ್ಲ. ಶ್ರೀ ಮುತ್ತ್ಯಾಜ್ಜ ಚನ್ನಪ್ರಭುದೇವನ ವಂಶದವರೇ ಈ ಬೃಹನ್ಮಠವನ್ನು ಕಟ್ಟಿಸಿದ ನಿಮಿತ್ತವಾಗಿ ತಮ್ಮ ಹೆಸರಿನಿಂದ ಅನೇಕ ಭೂದಾನಗಳನ್ನು ದೊರಕಿಸಿ ಅವುಗಳ ಉಪಭೋಗವನ್ನು ಅವರೇ ಈ ಹೊತ್ತಿಗೂ ಅಖಂಡವಾಗಿ ಮಾಡುತ್ತಿರುವರು. ಈ ಎಲ್ಲ ಸಂಗತಿಗಳ ಮೇಲಿಂದ ನಾನು ಕನ್ನಡದಲ್ಲಿ ಸಂಕ್ಷೇಪವಾಗಿ ಬರೆದ ಈ ಗ್ರಂಥವು ಎಷ್ಟು ಮಹತ್ವದ್ದಿರುವದೆಂಬದನ್ನು ತಿಳಿದುಕೊಳ್ಳಲಿಕ್ಕೆ ವಾಚಕರು ಇದನ್ನು ಮನಮುಟ್ಟಿ ಓದಬೇಕೆಂದು ಬಿನ್ನಯಿಸುತ್ತೇನೆ.

ಈ ಗ್ರಂಥವನ್ನು ಸಂಪೂರ್ಣವಾಗಿ “ಶಿವಾನುಭವ”ದಲ್ಲಿ ಪ್ರಕಟಿಸಬೇಕೆಂಬ ಉದ್ದೇಶದಿಂದ ರಾವಸಾಹೇಬ ಹಳಕಟ್ಟಿಯವರಿಗೆ ಹಾಗೆ ಹೇಳಿ ನನಗೆ ಬೇರೆ ಕೆಲವು ಪ್ರತಿಗಳನ್ನು ಕೊಡಬೇಕೆಂದು ನಾನು ಅವರಿಗೆ ಬಿನ್ನವಿಸಿಕೊಂಡದಕ್ಕೆ ಅವರು ಒಪ್ಪಿ ಮೊದಲಿನ ಮೂರು ಪ್ರಕರಣಗಳನ್ನು ‘ಶಿವಾನುಭವ’ದಲ್ಲಿ ಪ್ರಕಟಿಸಿದರು. ನಾಲ್ಕನೆಯ ಪ್ರಕರಣವನ್ನು ಏನೋ ಕಾರಣಗಳಿಂದ ಅದರಲ್ಲಿ ಪ್ರಕಟಿಸಲಿಕ್ಕೆ ಒಪ್ಪದೆ ಇದ್ದದರಿಂದ ಅವರ ಗ್ರಂಥದ ಉಳಿದ ಭಾಗವನ್ನು ಅನಿವಾರ್ಯವಾಗಿ ನಾನು ಧಾರವಾಡದ “ತೋಂಟದಾರ್ಯ ಪ್ರೆಸ್ಸ”ನಲ್ಲಿ ಅಚ್ಚು ಮಾಡಿಸಬೇಕಾಯಿತು. ಇದರಿಂದ ನನಗೆ ಎಷ್ಟೋ ರೀತಿಯಿಂದ ತೊಂದರೆಯಾಯಿತೆಂದು ಬರೆಯಲಿಕ್ಕೆ ವಿಷಾದವೆನಿಸುತ್ತದೆ.

ಶ್ರೀಯುತ ಎಮ್. ಆರ್. ಶ್ರೀನಿವಾಸಮೂರ್ತಿಯವರು “ಶ್ರೀಯುತ ಪುರಾಣಿಕರ ಆಕ್ಷೇಪಣೆಗಳಿಗೆ ಉತ್ತರ” ವೆಂಬ ಲೇಖವನ್ನು “ಶಿವಾನುಭವ”ದ ೧೯೩೭ನೇ ವರ್ಷದ ೨ನೆಯ ಸಂಚಿಕೆಯಲ್ಲಿ ಪ್ರಕಟಿಸಿರುವರು. ಅವರ ಉತ್ತರವು ಸರಿಯಾಗಿಲ್ಲದ್ದರಿಂದ ಅದಕ್ಕೆ ಪ್ರತ್ಯುತ್ತರವನ್ನು ಕೊಟ್ಟಿಲ್ಲ. ಬೇಕಾದವರು ಪ್ರಭುಲಿಂಗಲೀಲೆಯ ಸಂಗ್ರಹಕ್ಕೆ ಬರೆದ ಅವರ ಪೀಠಿಕೆಯನ್ನೂ ಮತ್ತು ಅದರೊಳಗಿನ ಕೆಲವು ಅಭಿಪ್ರಾಯಗಳಿಗೆ ನನ್ನ ಆಕ್ಷೇಪಣೆಗಳನ್ನೂ ಹಾಗೂ ಅವರು “ಶಿವಾನುಭವ”ದಲ್ಲಿ ಕೊಟ್ಟ ಉತ್ತರವನ್ನೂ ಓದಿದಲ್ಲಿ ಅವರ ಉತ್ತರವು ಎಷ್ಟರಮಟ್ಟಿಗೆ ಸರಿಯಾಗಿದೆಯೆಂಬದು ಗೊತ್ತಾಗುವದು.

ನಾನು ಕನ್ನಡದಲ್ಲಿ ಬರೆದ ಮೂಲಪ್ರತಿಯನ್ನು ಆಮೂಲಾಗ್ರವಾಗಿ ಓದಿ ಅದಕ್ಕೆ ಮುನ್ನುಡಿಯನ್ನು ಬರೆದುಕೊಟ್ಟದ್ದಕ್ಕೆ ನನ್ನ ಪರಮಮಿತ್ರ

ರಾದ ಶ್ರೀಯುತ ವೀರಭದ್ರಪ್ಪಾ ಬಸಪ್ಪಾ ಹಾಲಬಾವಿ ಬಿ. ಎ , ಎಲ್ ಎಲ್. ಬಿ., ನಿವೃತ್ತ ರಿನೆಯುವರ್ಗ ಸಬಜಜ್ಜ, ಧಾರವಾಡ, ಇವರಿಗೆ ನಾನು ತುಂಬಾ ಋಣಿಯಾಗಿರುವೆನು. ಮತ್ತು ತೋಂಟದಾರ್ಯ ಪ್ರೆಸ್ಸಿನವರು ಸಕಾಲಕ್ಕೆ ಈ ಗ್ರಂಥದ ಭಾಗವನ್ನು ಅಚ್ಚುಹಾಕಿ ಕೊಟ್ಟದ್ದಕ್ಕೆ ಅವರ, ಆದರಂತೆ ಇದರಲ್ಲಿ ಸೇರಿಸಿದ ಚಿತ್ರಗಳನ್ನು ಅಂದವಾಗಿ ಮುದ್ರಿಸಿಕೊಟ್ಟ ಲಿಂಗರಾಜ ಆರ್ಟಪ್ರೆಸ್ಸಿನವರ ಆಭಾರವನ್ನು ಮನ್ನಿಸದಿರಲಾರೆನು.

ಎರಡನೇ ಜನರ ಮನಸ್ಸನ್ನು ನೋಯಿಸುವದರ ಸಲುವಾಗಿ ಅಥವಾ ದ್ವೇಷಬುದ್ಧಿಯಿಂದ ಇಲ್ಲವೆ ಮತ್ಸರದಿಂದ ಈ ಗ್ರಂಥವನ್ನು ಬರೆದಿಲ್ಲ. ಈ ಗ್ರಂಥದಲ್ಲಿ ನನ್ನ ಕೈಯಿಂದ ಏನೂ ಹಾಕಿರುವದಿಲ್ಲ. ಆದರೆ ಒಂದು ತೋಟದೊಳಗಿನ ಬೇರೆ ಬೇರೆ ಬಣ್ಣಗಳ ಸುವಾಸನೆಯುಳ್ಳ ಹೂವುಗಳನ್ನು ತಂದು ಜಾಣನಾದ ಒಬ್ಬ ತೋಟಿಗನು ಸುಂದರವಾದ ಒಂದು ಮಾಲೆಯನ್ನು ಸಿದ್ಧಗೊಳಿಸಿ ಅದನ್ನು ತನ್ನ ಒಡೆಯನಿಗೆ ಸಮರ್ಪಿಸುವದರಿಂದ ಸಂತುಷ್ಟನಾದ ಆ ಒಡೆಯನನ್ನು ಕಂಡು ತಾನು ಕೃತಕೃತ್ಯನಾದೇನೆಂದು ಭಾವಿಸುವಂತೆ ಪುರಾತನರು ಅತಿ ಪರಿಶ್ರಮದಿಂದ ಲೋಕಶಿಕ್ಷಣಾರ್ಥವಾಗಿ ನಿರ್ಮಲಾಂತಃಕರಣದೊಳಗಿನ ಉದ್ಗಾರಗಳನ್ನು ಬರೆದಿಟ್ಟಂಥ ಪ್ರಮಾಣಭೂತ ಗ್ರಂಥಗಳೊಳಗಿನ ಪ್ರಬಲವಾದ ವಿಧಿವಾಕ್ಯಗಳನ್ನು ಆಯ್ದುಕೊಂಡು ಈ ಗ್ರಂಥವನ್ನು ಬರೆದಿದ್ದೇನೆ. ಇದರೊಳಗೆ ಲೇಖಕನಿಗೆ ಗೊತ್ತಾಗದೆ ಪ್ರಮಾದವಾದಲ್ಲಿ ಅದನ್ನು ಕ್ಷಮಿಸಿ ವಾಚಕರು ಲಕ್ಷಪೂರ್ವಕವಾಗಿ ಈ ಗ್ರಂಥವನ್ನು ಓದಿ ತಮ್ಮ ಮನದೊಳಗಿನ ಆಗಂತುಕ ಸಂಶಯಗಳನ್ನು ದೂರ ಮಾಡಿಕೊಂಡರೆ ನನ್ನ ಶ್ರಮದ ಸಾರ್ಥಕತೆಯಾಗಿ ನಾನು ಕೃತಕೃತ್ಯನಾದೇನೆಂದು ಭಾವಿಸುತ್ತೇನೆ.

| | |
|---|---|
| ಧಾರವಾಡ,<br>ಶಾಲಿವಾಹನ ಶಕೆ ೧೮೫೮ನೆಯ<br>ಧಾತುನಾಮ ಸಂವತ್ಸರ,<br>ವೈಶಾಖ ಶುದ್ಧ ೩.<br>ಬಸವಜಯಂತಿ. | ಶ್ರೀಪ್ರಭು ಪಾದಪದ್ಮ ಭೃಂಗ,<br>ಬುದ್ಧಯ್ಯಾ ಮುಗೆಯ್ಯಾ ಪುರಾಣಿಕ. |



ತೇರದಾಳ ಶ್ರೀಮನ್ನಿರಂಜನ ಜಗದ್ಗುರು ಶ್ರೀಮದನಾದಿ
ಅಲ್ಲಮಪ್ರಭುದೇವರ ಬೃಹನ್ಮಠದ ಮಹಾದ್ವಾರ

# ಶ್ರೀ ಪ್ರಭುದೇವರ ಕಾಲ.

## ೧ ನೆಯ ಪ್ರಕರಣ.

ನನ್ನಂಥ ಮಂದಬುದ್ಧಿಯ ಮನುಷ್ಯನು ಶ್ರೀಮನ್ನಿರಂಜನ ಜಗದ್ಗುರುಪಾದಾಮುಗೋಚರನಾದಂಥ ಆ ಅನಾದಿ ಜಂಗಮಲಿಂಗನ ಕಾಲ ನಿರ್ಣಯ ಮಾಡುವದೆಂದರೆ ಆಕಾಶಕ್ಕೆ ಗವಸಣಿಗೆ ಹಾಕಿದಂತೆ ಹಾಸ್ಯಾಸ್ಪದವೇ ಸರಿ; ಆದಾಗ್ಯೂ ಯಥಾಮತಿ ಪ್ರಯತ್ನಮಾಡುವದು ನನ್ನ ಆದ್ಯ ಕರ್ತವ್ಯವೆಂದು ತಿಳಿದು ಕೆಳಗಿನ ನಾಲ್ಕು ಪಂಕ್ತಿಗಳನ್ನು ವಾಚಕರ ಅವಗಾಹನಕ್ಕಾಗಿ ಇದರಡಿಯಲ್ಲಿ ಕೊಡುತ್ತೇವೆ. ಅನಾದಿ ವೀರಶೈವ ಸಾರಸಂಗ್ರಹ ನಾಮಕ ಗ್ರಂಥದ ೧೬ ನೆಯ ಪ್ರಕರಣದಲ್ಲಿ ವೇದಾಗಮೋಪನಿಷತ್ತುಗಳ ಆಧಾರದಿಂದ ಈ ಅನಾದಿ ಜಂಗಮಲಿಂಗನ ಮಹಾತ್ಮ್ಯವನ್ನು ವರ್ಣನಮಾಡಿರುವರು. ಅದನ್ನು ವಾಚಕರು ಓದಬೇಕೆಂದು ನಾವು ಅವರಿಗೆ ಬೇಡಿಕೊಳ್ಳುತ್ತೇವೆ. ಅಂದರೆ ವೇದಾಗಮೋಪನಿಷತ್ತುಗಳ ಕಾಲವು ಯಾವ ಕಾಲವೋ ಅದೇ ಕಾಲವು ಶ್ರೀ ಪ್ರಭುದೇವರೆಂದು ವಾಚಕರಿಗೆ ಸಹಜವಾಗಿ ಲಕ್ಷ್ಯದಲ್ಲಿ ಬರಬಹುದು. ಶ್ರೀಯುತ ವೀರಪ್ಪಾ ಬಸಪ್ಪಾ ಬಿಳೀಅಂಗಡಿ, ಬಿ. ಎ. ಎಲ್. ಎಲ್. ಬಿ. ವಕೀಲ ಹುಬ್ಬಳ್ಳಿ ಇವರು ಬರೆದ "ವೀರಶೈವ ಮತಪ್ರಾಚೀನತ್ವ" ಯೆಂಬ ಪುಸ್ತಕದಲ್ಲಿ ಅವರು ವೀರಶೈವ ಮತದ ಕಾಲನಿರ್ಣಯವನ್ನು ನಿಗಮಾಗಮೋಪನಿಷತ್ತುಗಳ ಶಿಲಾಲೇಖಗಳ ಮತ್ತು ತಾಮ್ರಪಟ ಇತ್ಯಾದಿಗಳ ಸಹಾಯದಿಂದ ಸಾಧಾರಣ ಸಿದ್ಧಗೊಳಿಸಿರುವರು. ಆ ಸನಾತನ ವೈದಿಕ ವೀರಶೈವ ಮತದ ಸಂಸ್ಥಾಪಕರಾದ ಶ್ರೀ ಪಂಚಾಚಾರ್ಯರಿಗೆ "ಮದೂರ್ಧ್ವ ಮುಖಸಂಜಾತೋ ನಿರಂಜನ ಗಣೇಶ್ವರಃ । ಶೂನ್ಯಪೀಠಾಧಿಕಾರೀಚ ಪಂಚಾಚಾರ್ಯ ಗುರುರ್ವರಃ ॥" ಅಂದರೆ ನನ್ನ ಊರ್ಧ್ವಮುಖದಿಂದ ಉತ್ಪನ್ನ

ಸಾದಂಥ ನಿರಂಜನನೆಂಬ ಹೆಸರಿನ ಗಣಾಧ್ಯಕ್ಷನು ಶೂನ್ಯಪೀಠದ ಅಧಿಕಾರಿಯಾಗಿ ಪಂಚಾಚಾರ್ಯರಿಗೆ ಶ್ರೇಷ್ಠ ಗುರುವಾಗಿರುವನು. ಈ ಸಂಪ್ರಭೇದಾಗಮದ ಆಧಾರದಿಂದ ಗುರುವಾಗಿ ಬಂದಂಥ ಆ ಪ್ರಭುದೇವರ ಕಾಲನಿರ್ಣಯವಾದರೂ ಆ ಪಂಚಾಚಾರ್ಯರ ಕಾಲನಿರ್ಣಯದ ಕೂಡ ಮಾಡಬೇಕಾಗುವದು.

ಮೈಸೂರಿನ ಆರ್ಕಿಯಾಲಾಜಿಕಲ್ ಡಾಯರೆಕ್ಟರ ಮಹಾಮಹೋಪಾಧ್ಯಾಯ ಪ್ರಾಕ್ತನ ವಿಮರ್ಶ ವಿಚಕ್ಷಣ ರಾವಬಹಾದ್ದೂರ ಆರ್. ನರಸಿಂಹಾಚಾರ್ಯ ಎಂ. ಎ. ಎಮ್. ಆರ್. ಎ. ಎಸ್. ಇವರು ತಮ್ಮ ಕರ್ನಾಟಕ ಕವಿಚರಿತೆಯ (೧೯೨೪ ರಲ್ಲಿ ತಿದ್ದಿದ ಮುದ್ರಣ) ಪ್ರಥಮ ಸಂಪುಟದ ೧೮೦ ನೆಯ ಪುಟದಲ್ಲಿ ಶ್ರೀ ಪ್ರಭುದೇವರ ಕಾಲನಿರ್ಣಯವನ್ನು ಕೆಳಗಿನಂತೆ ಮಾಡಿರುವರು. ಅದರಲ್ಲಿ "ಇಸ್ವಿ ಸನ್ ೧೧೬೦ ನೆಯ ಸುಮಾರಿನಲ್ಲಿ ಈತನು ಷಟ್ಸ್ಥಲ ಜ್ಞಾನಚಾರಿತ್ರ, ಶೂನ್ಯಸಂಪಾದನೆ, ಮಂತ್ರಗೋಪ್ಯ, ಸೃಷ್ಟಿಯವಚನ, ಬೆಡಗಿನವಚನ, ಮಂತ್ರಮಹಾತ್ಮ್ಯ, ಕಾಲಜ್ಞಾನವಚನವೆಂಬ ಗ್ರಂಥಗಳನ್ನು ಬರೆದಿದ್ದಾನೆ. ಇವನಿಗೆ ಅಲ್ಲಮ ಎಂಬ ಹೆಸರೂ ಉಂಟು; ಮಾಯಾಕೋಳಾಹಳ ಎಂಬ ಬಿರುದೂ ಇದ್ದಂತೆ ತಿಳಿಯುತ್ತದೆ. ಈತನ ವಿಷಯವಾಗಿ ಚನ್ನಬಸವಪುರಾಣ, ಪ್ರಭುಲಿಂಗಲೀಲೆ ಮೊದಲಾದ ಗ್ರಂಥಗಳಿಂದ ಈ ಅಂಶಗಳು ತಿಳಿಯ ಬರುತ್ತವೆ:— ಇವನು ವೀರಶೈವಕವಿ, ಈತನ ತಂದೆ ನಿರಹಂಕಾರ, ತಾಯಿ ಸುಜ್ಞಾನಿ, ಇವನ ಚಿತ್ತಸ್ಥೈರ್ಯವನ್ನು ಪರೀಕ್ಷಿಸುವದಕ್ಕಾಗಿ ಪಾರ್ವತೀದೇವಿ ತನ್ನ ತಾಮಸ ಗುಣವನ್ನು ಸ್ತ್ರೀರೂಪವಾಗಿ ಹುಟ್ಟುವಂತೆ ಅಟ್ಟಿದಳು. ಅದು ಬೆಳವಲನಾಡಿನ ಬನವಸೆಯ ರಾಜನಾದ ಮಮಕಾರನೃಪನ ಪತ್ನಿ ಮೋಹಿನಿದೇವಿಯ ಗರ್ಭದಲ್ಲಿ ಮಾಯೆ ಎಂಬ ಹೆಣ್ಣುಮಗಳಾಗಿ ಹುಟ್ಟಿತು. ಆ ಹೆಣ್ಣುಮಗಳು ಈತನನ್ನು ಮೋಹಗೊಳಿಸಲು ಯತ್ನಿಸಿದಾಗ ಈತನು ಅವಳನ್ನು ತಿರಸ್ಕರಿಸಿದನು. ಇವನು ಅನಿಮಿಷನ ಕೈಯ ಲಿಂಗವನ್ನು ಸ್ವೀಕರಿಸಿದನು. ಗೊಗ್ಗಯ್ಯ ಮುಕ್ತಾಯಿಗಳಿಗೆ ಬೋಧಿಸಿ ಮುಕ್ತಿಯನ್ನು ಕೊಟ್ಟನು. ಸೊನ್ನಲಿಗೆಗೆ ಹೋಗಿ ಸಿದ್ಧರಾಮನಿಗೆ ಶಿವತತ್ವವನ್ನು ತಿಳಿಸಿ ಅವನೊಡನೆ ಕಲ್ಯಾಣಕ್ಕೆ ಹೋಗಿ ಬಸವನಿಂದ ಸತ್ಕೃತನಾಗಿ ಶೂನ್ಯಪೀಠವನ್ನು ಹತ್ತಿದನು. ಬಳಿಕ ಶ್ರೀಶೈಲಕ್ಕೆ ಹೋಗಿ ಅಲ್ಲಿ ಮಹಾದೇವಿಗೆ ನಿರ್ವಾಣಪದವಿಯನ್ನು ಉಪದೇಶಿಸಿ ಬಸವನಿಗಿಂತ ಸ್ವಲ್ಪ ಕಾಲ ಮುಂಚೆ ಕದಳಿಯಲ್ಲಿ ಬಯಲಾದನು. ಇವನು ವೀರಶೈವ ಗುರು

ಗಳಲ್ಲಿ ಬಹಳ ಪ್ರಖ್ಯಾತನು. ಶ್ರೀ ಮದ್ದೇಶಿಕ ಷಟ್ಸ್ಥಲ ಚಕ್ರವರ್ತಿ ಬ್ರಹ್ಮಾ
ನಂದ ಪರಶಿವಮೂರ್ತಿ ವಿರಕ್ತಶಿಖಾಮಣಿ ಮಾಯಾಕೋಳಾಹಳ ಎಂದು
ಕೆಲವರು ವೀರಶೈವ ಗ್ರಂಥಕರ್ತರು ಈತನನ್ನು ವಿಶೇಷಿಸಿ ಬರೆದಿದ್ದಾರೆ.
ಇವನ ವಿಷಯವಾಗಿ ಪ್ರಭುಲಿಂಗಲೀಲೆ, ಪ್ರಭುದೇವರ ಪುರಾಣ, ಪ್ರಭು
ನಟನ ತಾರಾವಳಿ, ಪ್ರಭುಚರಿತ್ರೆ, ಪ್ರಭುಗೀತೆ ಮೊದಲಾದ ಗ್ರಂಥಗಳು
ಹುಟ್ಟಿವೆ. ಈತನ ವಚನಗಳಲ್ಲಿ ಗುಹೇಶ್ವರ ಎಂಬ ಅಂಕಿತವು ದೊರೆ
ಯುತ್ತದೆ. ಜ್ಯೋತಿರ್ನಿರ್ಣಯ ಶಾಂಭವೀ ಜ್ಞಾನದೀಕ್ಷಾ ಬೋಧೆ ನಾಮಕ
ಗ್ರಂಥದಲ್ಲಿ ವೀರಶೈವ ಮತವು ಈಶ್ವರ ಪ್ರೋಕ್ತವು. ಅದನ್ನು ಶ್ರೀ ಅಲ್ಲಮ
ಪ್ರಭುದೇವನು ಕಲ್ಯಾಣಪಟ್ಟಣದಲ್ಲಿ ಶ್ರೀ ಬಸವಾದಿ ಪ್ರಮಥಗಣಂಗಳಿಗೆ
ಎರಡೆಂಭತ್ತುಕೋಟಿ ವಚನಗಳಿಂದ ಉಪದೇಶಿಸಿದನು ಎಂದು ಹೇಳಿದೆ”
ಎಂದು ಬರೆದಿರುವರು. ಶ್ರೀ ಪ್ರಭುದೇವರು ಐಕ್ಯವಾದನಂತರ ಅವರ
ವಿಷಯವಾಗಿ ಹಿಂದಿನಿಂದ ಅನೇಕ ಗ್ರಂಥಗಳು ನಿರ್ಮಾಣವಾಗಿರುವವು.
ಅವುಗಳಲ್ಲಿ ಕೆಲವು ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯಲ್ಲಿ
ಪ್ರಸಿದ್ಧಿಸಲ್ಪಟ್ಟಿರುವವು. ಹೀಗಿರಲು ಅವುಗಳನ್ನು ವಿಚಾರಿಸದೆ ಕರ್ನಾಟಕ
ಕವಿಚರಿತೆಕಾರರು ಶ್ರೀ ಪ್ರಭುದೇವರ ಕಾಲವನ್ನು ಸುಮಾರು ಇಸ್ವಿ ಸನ್
೧೧೬೦ ಎಂದು ನಿರ್ಣಯಿಸಿರುವರು. ಆದುದರಿಂದ ಅದನ್ನೇ ಇದರಡಿ
ಯಲ್ಲಿ ವಿಶೇಷ ಸ್ಪಷ್ಟೀಕರಿಸುತ್ತೇವೆ. ಮೇಲೆ ಕಾಣಿಸಿದಂತೆ ಅನೇಕ
ಪ್ರಾಚೀನ ಮತ್ತು ಅರ್ವಾಚೀನ ವೀರಶೈವ ಗ್ರಂಥಕರ್ತರು ಶ್ರೀ ಪ್ರಭು
ವನ್ನು ವಿಶೇಷಿಸಿ ಬರೆದವರಲ್ಲಿ ಕೆಲವರು ಸ್ತುತಿಸಿದ ಸ್ತೋತ್ರಗಳಲ್ಲಿ
ಒಂದೊಂದೇ ಶ್ಲೋಕವನ್ನು ಮಾದರಿಗಾಗಿ ತೆಗೆದುಕೊಂಡು ಶ್ರೀಮನ್ನಿರಂ
ಜನ ಜಗದ್ಗುರು ಗ್ರಂಥಮಾಲೆಯ ಎರಡನೆಯ ಪುಷ್ಪವಾದ ಶ್ರೀ ಪ್ರಭು
ದೇವರ ಸ್ತೋತ್ರಸಂಗ್ರಹದಲ್ಲಿ ಮುದ್ರಿಸಲಾಗಿದೆ. ಅವುಗಳೊಳಗಿನ ಕೆಲವು
ವೀರಶೈವ ಗ್ರಂಥಕರ್ತೃಗಳ ಹೆಸರುಗಳನ್ನು ವಾಚಕರ ಸೌಕರ್ಯಕ್ಕಾಗಿ
ಕೆಳಗೆ ಕೊಡುವೆವು.

ಕ್ರಿ ಶ. ೧೬೦೬ ನೇಯ ಸುಮಾರಿನಲ್ಲಿ ವೃಷಭ ಪುರದ ಆಗಮಜ್ಞಾ
ನಿಸಿದ್ಧವೀರನೆಂಬ ತನ್ನ ಗುರುವಿನ ಆಜ್ಞಾನುಸಾರವಾಗಿ ಎಳಂದೂರ
ಸಿಂಹಾಸನಾಧೀಶ ಹರೀಶ್ವರನು (ಹರಿದೇವ) ಶ್ರೀ ಪ್ರಭುದೇವರ ಪುರಾಣ
ವನ್ನು ನಾನಾ ಷಟ್ಪದಿಯಲ್ಲಿ ಬರೆದಿದ್ದಾನೆ. ಇದರಲ್ಲಿ ಸಂಧಿಗಳು ೯, ಪದ
ಗಳು ೧೪೯೭ ಇದ್ದು ಇದರಲ್ಲಿ ಶಬ್ದವೈಚಿತ್ರ್ಯವು ಬಹಳೇ ಇದ್ದುದರಿಂದ ಈ

ಗ್ರಂಥಕ್ಕೆ ಪ್ರಾಸರತ್ನಾಕರವೆಂದು ಅನ್ನುವರು. ಇದರಲ್ಲಿ ಅಲ್ಲಮಪ್ರಭು ದೇವನ ಸಂಪೂರ್ಣ ಚರಿತ್ರೆ ಹೇಳಲ್ಪಟ್ಟಿದೆ.

ಕ್ರಿ. ಶ. ೧೫೮೪ ರಲ್ಲಿ ಮಳೆಯ ಮಲ್ಲೇಶನ ಶಿಷ್ಯನಾದ ವಿರೂಪಾಕ್ಷ ಪಂಡಿತನು ತನ್ನ ಚೆನ್ನಬಸವ ಪುರಾಣದಲ್ಲಿಯೂ, ಕ್ರಿ ಶ. ೧೫೮೦ ರ ಸುಮಾರಿನಲ್ಲಿ ಕೋಲ್ಹಾರದ ಅದೃಶ್ಯಕವಿಯು ತನ್ನ ಪ್ರೌಢದೇವರಾಯನ ಕಾವ್ಯದಲ್ಲಿಯೂ ಶ್ರೀ ಪ್ರಭುವನ್ನು ಕೊಂಡಾಡಿರುವರು.

ಕ್ರಿ. ಶ. ೧೫೫೦ ರ ಸುಮಾರಕ್ಕೆ ಪ್ರಸನ್ನದೇಶಿಕನ ಕುಮಾರ ಮರಿ ರಾಚವಟ್ಟೇಶ ನೆಂಬವನು ಪ್ರಭುನಟನ ತಾರಾವಳಿ ನಾಮಕ ಗ್ರಂಥವನ್ನು ಬರೆದಿದ್ದಾನೆ. ಇದರಲ್ಲಿ ೨೭ ಪದಗಳಿದ್ದು ಅವುಗಳಲ್ಲಿ ಶ್ರೀ ಪ್ರಭುವಿನ ಸಂಪೂರ್ಣ ಚರಿತ್ರವನ್ನು ಹೇಳಿದೆ.

ಕ್ರಿ. ಶ. ೧೫೭೩ ನೆಯ ಸುಮಾರಿನಲ್ಲಿ ಭಾವಚಿಂತಾರತ್ನ, ವೀರಶೈ ವಾಮೃತ ಪುರಾಣ, ಪುರಾತನ ರಗಳೆ ಇತ್ಯಾದಿ ಉದ್ಗ್ರಂಥಗಳನ್ನು ಬರೆದ ಗುಬ್ಬಿ ಮಲ್ಲಣಾರ್ಯನೂ, ಕ್ರಿ. ಶ ೧೫೦೦ ಸುಮಾರಿನಲ್ಲಿ ೬೩ ಪುರಾ ತನರ ಚರಿತ್ರೆಯನ್ನು ಬರೆದ ಪುಲಿಗೆರೆಯ ಸುರಂಗ ಕವಿಯೂ, ಕ್ರಿ. ಶ. ೧೪೭೦ ರಲ್ಲಿದ್ದ ತೋಂಟದ ಶ್ರೀ ಸಿದ್ಧೇಶ್ವರನೂ ಹಾಗು ಕರ್ನಾಟಕ ಕವಿ ಚರಿತಕಾರರ ಅಭಿಪ್ರಾಯದಂತೆ. ಕ್ರಿ. ಶ. ೧೪೩೦ ನಯ ಸುಮಾರಕ್ಕೆ ಆಗಿಹೋದ ಮತ್ತು ಅನುಭವಸೂತ್ರ, ಪ್ರಭುಗೀತೆ, ಏಕೋತ್ತರಷಟ್ಸ್ಥಲ ಷಟ್ಪದಿ, ಷಟ್ಸ್ಥಲ ಗದ್ಯ, ಶತಕತ್ರಯ ಇತ್ಯಾದಿ ಗ್ರಂಥಗಳನ್ನು ಬರೆದು ಪ್ರಸಿದ್ಧಿಯನ್ನು ಪಡೆದ ಮಗ್ಗೆಯಮಾಯಿದೇವಾಚಾರ್ಯನೂ ಶ್ರೀ ಪ್ರಭು ವನ್ನು ಕೊಂಡಾಡಿರುವರು.

ಕ್ರಿ. ಶ. ೧೪೩೦ ರ ಸುಮಾರಿನಲ್ಲಿ ವಿದ್ಯಾನಗರದೊಳಗಿನ ೧೦೧ ವಿರಕ್ತ ರೊಳಗಿನ ಕಲ್ಮಠದ ಪ್ರಭುದೇವನೆಂಬವನು ಶ್ರೀ ಪ್ರಭುದೇವರ ಮಂತ್ರ ಗೋಪ್ಯದ ಮೇಲೆ ಟೀಕೆಯನ್ನು ಬರೆದಿರುವನು. ಅದೇ ಸುಮಾರಿನಲ್ಲಿ ಚಾಮರಸನೆಂಬವನು ಪ್ರಭುಲಿಂಗ ಲೀಲೆಯೆಂಬ ಗ್ರಂಥವನ್ನು ಭಾಮಿನಿ ಷಟ್ಪದಿಯಲ್ಲಿ ಬರೆದಿರುವನು. ಇದರಲ್ಲಿ ೧೧೧೧ ಪದ್ಯಗಳಿದ್ದು ಪ್ರಭುವಿನ ಸಂಪೂರ್ಣ ಚರಿತ್ರವು ಹೇಳಲ್ಪಟ್ಟಿದೆ.

ಕ್ರಿ ಶ. ೧೪೩೦ ರ ಸುಮಾರಕ್ಕೆ ಕುಮಾರ ಬಂಕನಾಥನೆಂಬವನು ಶ್ರೀ ಪ್ರಭುದೇವರ ವಚನಗಳ ಮೇಲೆ ಟೀಕೆಯನ್ನು ಬರೆದಿರುವನು.

ಅದೇ ಕಾಲಕ್ಕೆ ಚೆನ್ನ ಶ್ರೀಪ್ರಭು, ಮಗಿಯುನರೇಂದ್ರ ಮತ್ತು ಗುರುಬ ಸವ ಎಂಬವರು ಪ್ರತಿಯೊಬ್ಬರು ೧೧೦೦ ಪದ್ಯಗಳಿಂದ ಶ್ರೀ ಪ್ರಭುವನ್ನು ಕೊಂಡಾಡಿರುವರು. ಅವುಗಳೊಳಗೆ ಸಿಕ್ಕಷ್ಟು ಕೆಲವು ಪದ್ಯಗಳನ್ನು ಶ್ರೀ ಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ೧ ನೆಯ, ೪ ನೆಯ, ೯ ನೆಯ, ಮತ್ತು ೧೧ ನೆಯ, ಪುಸ್ತಗಳಲ್ಲಿ ಹೇಳಿದೆ.

ಈ ಕುಮಾರ ಬಂಕನಾಥನ ಗುರುವಾದ ಮಹಲಿಂಗದೇವ (ವಾರಾಣಸೀಂದ್ರ) ನು ಕ್ರಿ. ಶ. ೧೪೨೫ ನೆಯ ಸುಮಾರಿನಲ್ಲಿ ಪ್ರಭುದೇವರ ಷಟ್‌ಸ್ಥಲ ಜ್ಞಾನಚಾರಿತ್ರೆ ಎಂಬ ಟೀಕಾತ್ಮಕ ಗ್ರಂಥವನ್ನು ಜಕ್ಕಣಾಮಾತ್ಯನ ಪ್ರಾರ್ಥನಾನುಸಾರವಾಗಿ ಬರೆದಿರುವೆನು.

ಕ್ರಿ. ಶ. ೧೪೦೦ ಸುಮಾರಿನಲ್ಲಿ ನೀಲಕಂಠ ಶಿವಾಚಾರ್ಯನು ತನ್ನ ಬ್ರಹ್ಮಸೂತ್ರ ವ್ಯಾಖ್ಯಾನರೂಪವಾದ ಕ್ರಿಯಾಸಾರವೆಂಬ ಗ್ರಂಥದಲ್ಲಿ ಶ್ರೀ ಪ್ರಭುವನ್ನು ಸ್ತುತಿಸಿರುವನು.

ಕ್ರಿ. ಶ ೧೩೬೯ ನೆಯ ಸುಮಾರಿನಲ್ಲಿ ಉಭಯುಕವಿತ್ವ ಸಮರ್ಥ ಭೀಮಕವಿಯು ತನ್ನ ಬಸವ ಪುರಾಣದಲ್ಲಿಯೂ ಮತ್ತು ಕ್ರಿ. ಶ. ೧೩೩೫ ನೆಯ ಸುಮಾರಿನಲ್ಲಿ ಜಟಾಶಂಕರ ದೇವನೆಂಬವನು ಶ್ರೀ ಪ್ರಭುದೇವರ ತ್ರಿವಿಧಿನಾಯಕ ಗ್ರಂಥದಿಂದಲೂ ಶ್ರೀ ಪ್ರಭುವನ್ನು ಕೊಂಡಾಡಿರುವರು.

ಕ್ರಿ. ಶ. ೧೨೨೨ ನೆಯ ಸುಮಾರಿನಲ್ಲಿ ಸೋಮರಾಜನೆಂಬ ಕವಿಯು ತನ್ನ ಶೃಂಗಾರಸಾರ ಅಥವಾ ಉದ್ಭಟ ಕಾವ್ಯದಲ್ಲಿ ಶ್ರೀ ಅಲ್ಲಮಪ್ರಭುವನ್ನು ಕೊಂಡಾಡಿ ಗುರು ಅಲ್ಲಮನ ಕೃಪೆಯಿಂದ ಈ ಕಾವ್ಯವನ್ನು ರಚಿಸಿದೆನೆಂದೂ ಮತ್ತು ಅಲ್ಲಮ ನಾಮ ಸ್ಮರಣೆಯನ್ನು ಒಂದೊಂದು ನಿಮಿತ್ತ್ಯವಾಗಿ ಮಾಡಬೇಕೆಂತಲೂ ಹೇಳಿ ಪ್ರತಿಯೊಂದು ಆಶ್ವಾಸದ ಕೊನೆಯಲ್ಲಿ ಅಲ್ಲಮಪ್ರಿಯನೆಂದು ಈಶ್ವರನನ್ನು ಸ್ತುತಿಸಿರುವನು.

ಕ್ರಿ. ಶ. ೧೧೯೫ ರ ಸುಮಾರಿನಲ್ಲಿ ಪಾಲ್ಕುರಿಕೆ ಸೋಮಾರಾಧ್ಯನು ತನ್ನ ಶಿಷ್ಯನಾದ ಸಂಗಯ್ಯಾಸಿಗೋಸುಗ ಜ್ಯೋತಿರ್ಮಯ ಶಾಂಭವೀಜ್ಞಾನದೀಕ್ಷಾ ಬೋಧೆನಾಮಕ ಗ್ರಂಥದ ಪರಮ ರಹಸ್ಯವನ್ನು ೧೬೦ ವಚನಗಳಲ್ಲಿ ಅಡಕಮಾಡಿ ಹೇಳಿರುವನು. ಆ ಜ್ಯೋತೀರ್ಮಯ ಶಾಂಭವೀಜ್ಞಾನದೀಕ್ಷಾಬೋಧೆಯಲ್ಲಿ "ಶ್ರೀ ಪ್ರಭುದೇವನು ಕಲ್ಯಾಣಪಟ್ಟಣದೊಳಗೆ ಶ್ರೀ ಬಸವಾದಿ ಪ್ರಮಥಗಣಂಗಳಿಗೆ ಎರಡೆಂಭತ್ತು ಕೋಟಿ ವಚನಗಳಿಂದ ವೀರಶೈವೋಪದೇಶವನ್ನು ಮಾಡಿದ" ನೆಂದು ಹೇಳಿದೆ.

ಕ್ರಿ. ಶ. ೧೧೬೦ ನೆಯ ಸುಮಾರಿನಲ್ಲಿ ಇದ್ದಂಥ ಮರುಳಶಂಕರ ದೇವನಿಗೆ ಪ್ರಭುದೇವನು ನಿರ್ವಾಣಪ್ರಾಪ್ತಿಯ ಮಾರ್ಗವನ್ನು ಹೇಳಿ ಮುಕ್ತಮಾಡಿದನೆಂದು ಪ್ರಭುಲಿಂಗಲೀಲೆಯಲ್ಲಿ ಹೇಳಿರುವದರಿಂದಲೂ, ಪಾಲ್ಕುರಿಕೆ ಸೋಮಾರಾಧ್ಯನ ಗಣಸಹಸ್ರ ನಾಮದಲ್ಲಿ ಹೇಳಲ್ಪಟ್ಟ ಅಜ ಗಣ್ಣನು ಶ್ರೀ ಪ್ರಭುವಿನಿಂದ ಹೊಗಳಲ್ಪಟ್ಟನೆಂದೂ, ಅಜಗಣ್ಣನ ತಂಗಿ ಯಾದ ಮುಕ್ತಾಯಕ್ಕನನ್ನು ಉದ್ಧಾರ ಮಾಡಿದ ವಿವರವನ್ನು ಪ್ರಭು ಲಿಂಗಲೀಲೆಯಲ್ಲಿ ಹೇಳಿರುವದರಿಂದಲೂ, ಹಾಗು ಉಭಯಕವಿಶರಭಭೇ ರುಂಡ, ಉಭಯಕವಿ ಕಮಲರವಿ ಅದಟಕವಿನಿಕರಚೌದಂತ ಮುಂತಾದ ಬಿರುದುಗಳನ್ನು ಧಾರಣಮಾಡಿದಂಥ ರಾಘವಾಂಕನು ಯಾವ ಸಿದ್ಧರಾ ಮೇಶ್ವರ ಪುರಾಣವನ್ನು ಬರೆದಿರುವನೋ, ಅಂಥ ಸಿದ್ಧರಾಮನ ಉದ್ಧಾ ರವನ್ನು ಮಾಡಿದನೆಂದೂ ಪ್ರಭುಲಿಂಗಲೀಲೆಯಲ್ಲಿ ಹೇಳಿರುವದರಿಂದಲೂ ಕ್ರಿ. ಶ. ೧೧೬೦ ನೆಯ ಸುಮಾರಿನಲ್ಲಿ ಶ್ರೀ ಪ್ರಭುದೇವನು ಇದ್ದಿರಬಹು ದೆಂದು ಕರ್ನಾಟಕ ಕವಿಚರಿತ್ರೆಕಾರರ ಅಭಿಪ್ರಾಯವಿದೆ. ಕ್ರಿ. ಶ. ೧೧೫೬-೬೭ ವರೆಗೆ ಬಿಜ್ಜಳನು ಕಲ್ಯಾಣ (ನಿಜಾಮ ಇಲಾಖಾ) ನಗರದಲ್ಲಿ ಸಾರ್ವ ಭೌಮರಾಜನಿದ್ದನು. ಆ ಕಾಲಕ್ಕೆ ಶ್ರೀ ಬಸವೇಶ್ವರನು ಆತನ ಮುಖ್ಯ ಮಂತ್ರಿಯಾಗಿದ್ದನು. ಆ ಕಾಲಕ್ಕೆ ಬಸವೇಶ್ವನು ಸುಮಾರು ೩೧-೩೨ ವರುಷದವನಿರಬಹುದು. ಯಾಕಂದರೆ ಅವನು ಕ್ರಿ ಶ. ೧೧೩೪ ನೆಯ ಸುಮಾರಿನಲ್ಲಿ ಜನ್ಮ ತಾಳಿರುವನು. ಶ್ರೀ ಪ್ರಭುದೇವನು ಬಸವೇಶ್ವರನ ಕಾಲಕ್ಕೆ ಕಲ್ಯಾಣನಗರಕ್ಕೆ ಹೋದದ್ದು ಇತಿಹಾಸ ಪ್ರಸಿದ್ಧವಿದೆ. ಇಷ್ಟರ ಮೇಲಿಂದಲೇ ಶ್ರೀ ಪ್ರಭುದೇವನ ಕಾಲವು ಸುಮಾರು ಕ್ರಿ. ಶ. ೧೧೬೦ ಇರಬಹುದೆಂದು ಊಹಿಸುವದು ಸಮಂಜಸವೆನಿಸಲಾರದು. ಯಾಕಂದರೆ ಕಲ್ಯಾಣನಗರದಲ್ಲಿ ಬಸವೇಶನನ್ನು ಪ್ರಭುದೇವನು ಕಂಡ ವೇಳೆಯಲ್ಲಿ ಪ್ರಭುದೇವನೇನು ಚಿಕ್ಕವನೋ, ಬಸವೇಶನ ಸಮವಯಸ್ಕನೋ, ಅಥವಾ ಅವನಿಗಿಂತ ತರುಣನೋ, ಇಲ್ಲವೆ ಹಿರಿಯನೋ, ಇದನ್ನು ತಿಳಿಯಲು ಏನೂ ಮಾರ್ಗವಿಲ್ಲವು. ಮತ್ತು ಅದನ್ನು ಈ ವರೆಗೂ ಯಾವ ಇತಿಹಾ ಸಕಾರರೂ ಸಂಶೋಧಿಸಿ ಸಿದ್ಧಪಡಿಸಿಲ್ಲವು. ಬಸವನಗಿಂತಲು ಸುಮಾರು ೧೨೫ ವರುಷದ ಪೂರ್ವದಲ್ಲಿ ಶ್ರೀ ಪ್ರಭುದೇವನು ಇದ್ದನೆಂಬ ಬಗ್ಗೆ ಆಧುನಿಕ ಎಷ್ಟೋ ಕಾಗದ ಪತ್ರಗಳು ಸಿಗುತ್ತವೆ. ಅವು ಯಾವವೆಂದರೆ ಡಾಕ್ಟರ ಕೇತಕರ ಇವರು ತಮ್ಮ ಮಹಾರಾಷ್ಟ್ರ ಜ್ಞಾನಕೋಶ, ಭಾಗ ೧೦-೧೧, (ಕ) ಅಕ್ಷರ, ಪುಟ ೨೪೯ ರಲ್ಲಿ “ ಶ್ರೀ ಬಸವ ಇವನು ಲಿಂಗಾ

ಯುತ ಮತದ ಸಂಸ್ಥಾಪಕನಿರದೆ ಆ ಧರ್ಮದ ಸುಧಾರಕನೂ ಮತ್ತು
ಪ್ರಸಾರಕನೂ ಇದ್ದನೆಂದು ಅಂದಿರುವರು. ಆದರೀತಿ ಅದೇ ಮಹಾ
ರಾಷ್ಟ್ರ ಜ್ಞಾನಕೋಶ, ಭಾಗ ೨೦ (ಶ) ಅಕ್ಷರ, ಪುಟ ೯೬ ರಲ್ಲಿ "೯-೧೦
ಶತಮಾನದಲ್ಲಿ ಕಾಶ್ಮೀರದೊಳಗೆ ಎರಡು ಶೈವ ಪಂಥಗಳು ಉದಯವಾ
ದವು. ಅದರಂತೆ ೧೧ ನೆಯ ಶತಮಾನದಲ್ಲಿ ಕರ್ನಾಟಕ ಪ್ರಾಂತದೊ
ಳಗೆ ವೀರಶೈವ ಅಥವಾ ಲಿಂಗಾಯತ ಪಂಥವು ಉದಯವಾಯಿತು.
ಬಸವನು ವೀರಶೈವ ಪಂಥದ ಪ್ರವೃತ್ತಕನೆಂಬ ತಿಳವಳಿಕೆಯು ಇದ್ದರೂ
ಬಸವನಿಗಿಂತಲೂ ಪೂರ್ವದಲ್ಲಿ ಈ ಪಂಥವು ಅಸ್ತಿತ್ವದಲ್ಲಿದ್ದು ಆ ಪಂಥ
ವನ್ನು ಬಸವನು ಊರ್ಜಿತಾವಸ್ಥೆಗೆ ತಂದನೆಂದು ಇತ್ತೀಚೆಯ ಶೋಧ
ಗಳ ಮೇಲಿಂದ ಸಿದ್ಧವಾಗಿದೆ" ಎಂದು ಅಂದಿದೆ. ಇದರ ಮೇಲಿಂದ
ನೋಡಲಾಗಿ ಶ್ರೀ ಬಸವನಿಗಿಂತಲು ಪೂರ್ವದಲ್ಲಿ ಅನೇಕ ಶಿವಶರಣರು
ಆಗಿ ಹೋದದ್ದು ನಿಜವೆಂದು ಸ್ಪಷ್ಟವಾಗಿ ಕಂಡುಬರುತ್ತದೆ. ಇವರೊಳಗಿ
ನವನೊಬ್ಬನಾದ ಸಕಲೇಶ ಮಾದರಸನು ಕ್ರಿ. ಶ. ೧೧೫೦ ರ ಸುಮಾ
ರಕ್ಕೆ ಆಗಿಹೋದನು. ಇವನು ವಚನಗಳನ್ನು ಬರೆದಿದ್ದಾನೆ. ಇವನು
ವೀರಶೈವ ಕವಿಯು. ಪದ್ಮಣಾಂಕನು (ಸು ೧೩೮೫) ಪದ್ಮರಾಜ ಪುರಾಣ
ದಿಂದ ಇವನ ವಿಷಯವಾಗಿ ಈ ಅಂಶಗಳು ತಿಳಿಯುತ್ತವೆ. ಈತನ
ತಂದೆಯಾದ ಮಲ್ಲರಸನು ಕಲ್ಲಕುರಿಕೆಯಲ್ಲಿ ದೊರೆಯಾಗಿದ್ದು ವಿರಕ್ತನಾಗಿ
ಶ್ರೀ ಶೈಲಕ್ಕೆ ಹೋದನು. ಇವನು ಕೆಲವುಕಾಲ ಅಲ್ಲಿ ಆಳುತ್ತಿದ್ದು ವಿರಕ್ತಿ
ಹುಟ್ಟಿ ಅಂಬೆಯಮಾರ್ಗವಾಗಿ ಶ್ರೀ ಶೈಲಕ್ಕೆ ಹೋಗಿ ತಂದೆಯನ್ನು
ಕಾಣಲು ಅವನು— ನೀನು ಕಲ್ಯಾಣದಲ್ಲಿ ಧರ್ಮ ಸ್ಥಾಪನೆಗಾಗಿ
ಹುಟ್ಟುವ ಬಸವನೊಡನೆ ಕಾಲವನ್ನು ಕಳೆಯಬೇಕು— ಎಂದು ಹೇಳಿ
ಹಿಂದಕ್ಕೆ ಕಳುಹಿಸಿದನು. ಇವನ ಮಗ ಮಾಯಿದೇವ, ಮೊಮ್ಮಗ ಕೆರೆ
ಯಪದ್ಮರಸ. ಇದರಿಂದ ಇವನು ಬಸವನಿಗಿಂತ ಕೆಲವು ಕಾಲ ಹಿಂದೆ
ಇದ್ದವನೆಂದೂ ಕೆರೆಯಪದ್ಮರಸನ ಪಿತಾಮಹನೆಂದೂ ತಿಳಿಯುತ್ತದೆ. ಆದು
ದರಿಂದ ಇವನ ಕಾಲವು ಸುಮಾರು ಕ್ರಿ ಶ. ೧೧೫೦ ಆಗಿರಬಹುದೆಂದು
ಕವಿಚರಿತೆಕಾರರು ತಮ್ಮ ಕವಿಚರಿತೆಯ ಪ್ರಥಮ ಸಂಪುಟದ ೧೬೭ ನೆಯ
ಪುಟದಲ್ಲಿ ಹೇಳಿರುವರು. ಶ್ರೀ ಪ್ರಭುದೇವನು ಮಹಾದೇವಿಯಕ್ಕನಿಗೆ
ನಿರ್ವಾಣಪ್ರಾಪ್ತಿಯ ಮಾರ್ಗವನ್ನು ಬೋಧಿಸಲು ಕದಳೀ ಬನಕ್ಕೆ ಹೋಗುವ
ದಾರಿಯಲ್ಲಿ ಶ್ರೀ ಶೈಲದಲ್ಲಿ ಈ ಸಕಲೇಶ ಮಾದರಸನನ್ನು ಉದ್ಧಾರ
ಮಾಡಿದ್ದು ಪುರಾಣ ಪ್ರಸಿದ್ಧವದೆ. ಇದರ ಮೇಲಿಂದ ನೋಡಲಾಗಿ

ಶ್ರೀ ಪ್ರಭುದೇವನ ಕಾಲವು ಕ್ರಿ. ಶ, ೧೧೫೦ ರಕ್ಕಿಂತಲೂ ಹಿಂದೆ ಹೋಗುತ್ತದೆ. ಅದರಂತೆ ಶ್ರೀ ಸಿದ್ಧರಾಮನ ಕಾಲವಾದರೂ ಕ್ರಿ. ಶ. ೧೧೬೦ ರಕ್ಕಿಂತಲೂ ಹಿಂದೆ ಹೋಗುವದು. ಇದೂ ಅಲ್ಲದೆ ಈ ಸಿದ್ಧರಾಮನು ವಿದ್ಯಾ ಸಮುದ್ರನೆಂಬ ಬಿರುದನ್ನು ಪಡೆದಂಥ ಕರ್ಪರನೆಂಬ ಹೆಸರಿನ ಜೋಗಿಯನ್ನು ವಾದದಲ್ಲಿ ಗೆದ್ದಿರುವನು. ಕ್ರಿ. ಶ. ೧೦೮೪ ರೊಳಗಿನ ಕರ್ಪರಸನೇ ಇವನಿರಬಹುದು, (*Ind. Ant XIII 91*) ಎಂದರೆ ಕ್ರಿ. ಶ. ೧೦೮೪ ರ ಸುಮಾರಿನಲ್ಲಿ ಈ ಸಿದ್ಧರಾಮನು ಪ್ರೌಢನೂ ಮತ್ತು ಬಹಳ ವಿದ್ವಾನನೂ ಇದ್ದಿರಬಹುದು. ಆದುದರಿಂದ ಶ್ರೀ ಪ್ರಭುದೇವನ ಕಾಲವು ಕ್ರಿ. ಶ. ೧೦೮೪ ರಕ್ಕಿಂತಲೂ ಹಿಂದೆ ಹೋಗುತ್ತದೆ.

ಶ್ರೀ ರೇವಣ ಸಿದ್ಧೇಶ್ವರನು ಸಿದ್ಧರಾಮನ ತಾಯಿಯಾದ ಸುಗ್ಗಲ ದೇವಿಗೆ ಸಿದ್ಧರಾಮನ ಜನನದ ವಿಷಯವಾಗಿ ಮುಂಚಿತವಾಗಿಯೇ ಸೂಚಿಸಿದ್ದನೆಂಬುದು ವೀರಶೈವ ಗ್ರಂಥಗಳ ಮೇಲಿಂದ ತಿಳಿದು ಬರುತ್ತದೆ. ಆದುದರಿಂದ ಈ ರೇವಣಸಿದ್ಧೇಶ್ವರನ ಕಾಲವಾದರೂ ಸುಮಾರು ಕ್ರಿ. ಶ. ೧೦೬೦ ರ ಕ್ಕಿಂತಲೂ ಹಿಂದೆ ಇರಬೇಕಾಗುತ್ತದೆ. ಮತ್ತು ಶ್ರೀಕರಾಚಾರ್ಯನು ಈ ಗುರು ರೇವಣಸಿದ್ಧನ ನಾಮನಿರ್ದೇಶವನ್ನು ತನ್ನ ಶ್ರೀಕರ ಭಾಷೆಯಲ್ಲಿ ಮಾಡಿರುವನು. ಹಾಗು ಪ್ರಭುದೇವ ಮತ್ತು ರೇವಣಸಿದ್ಧ ಹೀಗೆ ಉಭಯತರು ಕೂಡಿ ಸಮಾಜೋದ್ಧಾರದ ಕೆಲಸಗಳನ್ನು ಮಾಡುತ್ತಿದ್ದರೆಂದು ವೀರಶೈವರ ಇತಿಹಾಸದಿಂದ ಸಿದ್ಧವಾಗುತ್ತದೆ. ಉಭಯತರ ಪುಣ್ಯಸ್ಥಾನಗಳಾದರೂ ಮಹಾರಾಷ್ಟ್ರ ಮೊದಲಾದ ದೇಶಗಳಲ್ಲಿ ಒಂದಕ್ಕೊಂದು ಸಮೀಪದಲ್ಲಿರುವವು. ಇದೂ ಅಲ್ಲದೆ ಕಾಯಕದ ಜಂಗಮರೂ ಕೂಡ ಈ ವರೆಗೂ. "ರೇವಣಸಿದ್ಧೇಶ್ವರ ಪ್ರಭುವೇ" ಎಂದು ಅನ್ನತ್ತ ಭಿಕ್ಷೆಯನ್ನು ಬೇಡುತ್ತಿರುವರು. ಇದರಮೇಲಿಂದ ನೋಡಲಾಗಿ ಶ್ರೀ ಪ್ರಭುದೇವನ ಕಾಲವು ಕ್ರಿ. ಶ. ೧೦೬೦ ಕ್ಕಿಂತಲೂ ಹಿಂದೆಹೋಗುತ್ತದೆ.

ಶ್ರೀಪತಿ ಪಂಡಿತ ವೀರಶೈವ ಪಂಡಿತತ್ರಯಗಳಲ್ಲಿ ಒಬ್ಬನು. ಇವನ ಕಾಲವು ಸುಮಾರು ಕ್ರಿ. ಶ. ೧೧೬೦ ಎಂದು ಕರ್ನಾಟಕ ಕವಿಚರಿತೆಕಾರರು ನಿರ್ಧರಿಸಿರುವರು. ಆದರೆ ಶ್ರೀಕರ ಭಾಷ್ಯದ ಕರ್ತೃವಾದ ಶ್ರೀಪತಿ (ಶ್ರೀಕರಾಚಾರ್ಯ)ನು ತನ್ನ ಶ್ರೀಕರ ಭಾಷ್ಯದ ಆದ್ಯಂತ್ಯದಲ್ಲಿ ತನಗೆ ಸಿಂಹಾಸನಾಧಿಪತಿ ಯತೀಂದ್ರನೆಂದು ಸಂಬೋಧಿಸಿಕೊಂಡಿರುವನು. ಈತನು ಶಂಕರಾಚಾರ್ಯರ ಸಮಾನ ಯೋಗ್ಯತೆಯುಳ್ಳವನಿದ್ದು ಕ್ರಿ. ಶ. ೧೧೬೦ ರ

ಸುಮಾರಿನಲ್ಲಿ ಇದ್ದನೆಂದು ಮದ್ರಾಸದ 'ಶ್ರೀಯುತ ನಾರಾಯಣಶಾಸ್ತ್ರಿ, ಬಿ. ಎ. ಬಿ; ಎಲ್, ಇವರು ಇಂಡಿಯನ್ ರಿವ್ಯೂಮಾಸಿಕದ ಕ್ರಿ. ಶ. ೧೯೧೫ ನೇ ವರ್ಷದ ಮೇ ತಿಂಗಳ ಸಂಚಿಕೆಯಲ್ಲಿ ಹೇಳಿರುವರು.

ನಿರಾಭಾರಿ ಎಂಬ ಒಕ್ಕಣಿಕೆಯನ್ನು ಪ್ರಭುಸಾಂಪ್ರದಾಯಕರಾದ ವಿರಕ್ತರು ತಮಗೆ ಉಪಯೋಗಿಸುತ್ತಿರುವರು. ಇದರ ಮೇಲಿಂದ ಶ್ರೀಕರಾಚಾರ್ಯನು ವಿರಕ್ತನಿದ್ದಿರಬಹುದಲ್ಲದೆ ಆ ಕಾಲಕ್ಕೆ ನಿರಾಭಾರಿ ವಿರಕ್ತ ಆಶ್ರಮವು ಅಸ್ತಿತ್ವದಲ್ಲಿದ್ದು ಆ ಆಶ್ರಮದೊಳಗಿನ ಜನರು ಆ ಕಾಲದಲ್ಲಿ ಪ್ರಖ್ಯಾತರಿದ್ದದ್ದು ನಿರ್ವಿವಾದವಾಗಿ ಸಿದ್ಧವಾಗುತ್ತದೆ. ನಿರಾಭಾರಿ ವಿರಕ್ತ ಜನರು ಪ್ರಭುಸಾಂಪ್ರದಾಯಕರೆಂಬುವದು ಶಾಸ್ತ್ರ ಪ್ರಸಿದ್ಧವೇ ಅದೆ. ಆತ ಏವ ಶ್ರೀ ಪ್ರಭುದೇವನ ಕಾಲವು ಕ್ರಿ. ಶ. ೧೦೬೦ ರಕ್ಕಿಂತಲೂ ಹಿಂದೆ ಹೋಗುತ್ತದೆ ಎಂದು ಮೇಲೆ ಹೇಳಿದ್ದು ನಿಸ್ಸಂಶಯವಾಗಿ ಸಿದ್ಧವಾಗುತ್ತದೆ.

ಮಿ॥ ಉಯಿಲ್ಯಮ್‌ರಾಯಿಸ್ ಇವರು ತಮ್ಮ ಮೈಸೂರ ಮತ್ತು ಕುರ್ಗ ಎಂಬ ಹೆಸರಿನ ಗ್ರಂಥದಲ್ಲಿ "ಹೇಗೆ ಏಕಾಂತ ರಾಮಯ್ಯನೆಂಬ ಒಬ್ಬ ಶಿವಶರಣನು ೫೦೦ ವೀರಶೈವ ಪಂಡಿತರೊಡನೆ ಬದಾಮಿ ತಾಲೂಕಿನ ಹತ್ತರಿರುವ ಐಹೊಳಿಯೆಂಬಲ್ಲಿದ್ದು ಇತರ ಮತಾವಲಂಬಿ ಜನರಿಗೆ ವೀರಶೈವ ದೀಕ್ಷೆಯನ್ನು ಕೊಡುತ್ತಿದ್ದನೆಂದೂ ಮತ್ತು ಅದೇ ಕಾಲಕ್ಕೆ ಶ್ರೀಬಸವನು ಬಿಜ್ಜಳನ ಮಂತ್ರಿಯಾಗಿದ್ದು ಏಕಾಂತರಾಮಯ್ಯನ ಕಾರ್ಯವನ್ನೇ ಮುಂದೆ ಸಾಗಿಸಿದ್ದನೆಂದೂ" ಅಂದಿರುವರು. ಆದರಂತೆಯೇ ಕ್ರಿ. ಶ. ೧೦೪೦ ರ ಸುಮಾರಿನಲ್ಲಿ ಜೇಡರ ದಾಸಿಮಾರ್ಯನೆಂಬ ಒಬ್ಬ ಶಿವಶರಣನು ಜೈನರನ್ನು ಗೆದ್ದು ಸುಗ್ಗಲದೇವಿಯ ಗಂಡನಾದ ಜಯಸಿಂಹನೆಂಬ ರಾಜನಿಗೆ ವೀರಶೈವ ದೀಕ್ಷೆಯನ್ನು ಕೊಟ್ಟದ್ದು ತಿಳಿಯಬರುತ್ತದೆ; (ಬಸವ ಪುರಾಣ ಸಂಧಿ ೫೧ ಮತ್ತು ವೃಷಭೇಂದ್ರವಿಜಯ ಆಶ್ವಾಸ ೩೫) ಕರ್ನಾಟಕ ಕವಿಚರಿತೆಕಾರರು ಕವಿಚರಿತೆಯ ಪ್ರಥಮಸಂಪುಟದ ೨೦೧ ನೇ ಪುಟದಲ್ಲಿ "ಬ್ರಹ್ಮಶಿವನೆಂಬ (ಸು. ೧೧೨೫) ಆ ಕವಿಯ ಹೆಸರನ್ನು ಹೇಳುವದರಿಂದ ದಾಸಿಮಯ್ಯನು ಅವನಿಗಿಂತ ಮುಂಚೆ ಇದ್ದಿರಬೇಕು. ಆದುದರಿಂದ ಈ ರಾಜನು ೧೦೧೮ ರಿಂದ ೧೦೪೨ ರ ವರೆಗೆ ಆಳಿದ ಚಾಳುಕ್ಯ ರಾಜನಾದ ೧ ನೇ ಜಯಸಿಂಹನಾಗಿರಬೇಕು" ಎಂದು ಅಂದಿರುವರು. ಈ ದಾಸಿಮಾರ್ಯನು ಜಂಗಮಲಿಂಗನ ಸ್ತುತಿಯನ್ನು ಮಾಡಿರುವನು ಶ್ರೀ ಪ್ರಭುದೇವನಿಗೆ ಜಂಗಮಲಿಂಗನೆಂಬುವದು ಜಗತ್ಪ್ರಸಿದ್ಧವದೆ. ಈ

ಜೇಡರ ದಾಸಿಮಾರ್ಯನಿಗೆ ನನ್ನಂಥ ದಾನಶೂರರಿಲ್ಲೆಂದು ಗರ್ವಬಂದಾಗ್ಗೆ ಆತನ ಗರ್ವ ಪರಿಹಾರವನ್ನು ಶಂಕರದಾಸಿಮಾರ್ಯನು ಮಾಡಿದನೆಂದು ಹರೀಶ್ವರಕೃತ ಶಂಕರದೇವ ರಗಳೆ, ಆಂಧ್ರಭಾಷೆಯೊಳಗಿನ ಸಿದ್ಧಕವಿಕೃತ ಮಲಬಸವ ಪುರಾಣ ಮತ್ತು ಭೀಮಕವಿಕೃತ ಬಸವಪುರಾಣ ಇತ್ಯಾದಿ ಗ್ರಂಥಗಳಲ್ಲಿ ಹೇಳಿರುವದು. ಇದರ ಮೇಲಿಂದ ಜೇಡರ ದಾಸಿಮಾರ್ಯ ಹಾಗು ಶಂಕರದಾಸಿಮಾರ್ಯ ಈ ಉಭಯತರು ಸಮಕಾಲೀನರೆಂದು ಗೊತ್ತಾಗುತ್ತದೆ. ಈ ಶಂಕರದಾಸಿಮಾರ್ಯನು ಪ್ರಭುದೇವರನ್ನು ಸ್ತುತಿಸಿರುವನೆಂದು ಶೂನ್ಯಸಂಪಾದನೆಯಲ್ಲಿ ಹೇಳಿರುವದು. ಆದುದರಿಂದ ಈ ಮೂವರು ಸಮಕಾಲೀನರೆಂದು ಸಿದ್ಧವಾಗುತ್ತದೆ. ಅಂದಮೇಲೆ ಪ್ರಭುದೇವನ ಕಾಲವಾದರು ಕ್ರಿ ಶ. ೧೧೪೦ ರ ಕ್ಕಿಂತಲೂ ಹಿಂದೆ ಹೋಗುತ್ತದೆ.

ಕರ್ನಾಟಕ ಕವಿಚರಿತೆಕಾರರು ತಮ್ಮ ಕವಿಚರಿತೆಯ ದ್ವಿತೀಯ ಸಂಪುಟದ ೧೫೩ ನೇಯ ಪುಟದಲ್ಲಿ "ಸುಮಾರು ಕ್ರಿ. ಶ. ೧೨೫೦ ರಲ್ಲಿ ಅಮಲಾನಂದನಿಂದ ರಚಿತವಾದ ಕಲ್ಪತರುವೆಂಬ ವ್ಯಾಖ್ಯಾನದ ಹೆಸರನ್ನು ಶ್ರೀ ನಿಜಗುಣ ಶಿವಯೋಗಿಯು ತನ್ನ ವಿವೇಕ ಚಿಂತಾಮಣಿಯಲ್ಲಿ ಉತ್ತರ ಮೀಮಾಂಸದ ವಿಚಾರದ ಕಾಲಕ್ಕೆ ತೆಗೆದುಕೊಂಡಿರುವದರಿಂದ ಈ ನಿಜಗುಣಶಿವಯೋಗಿಯು ಕ್ರಿ. ಶ. ೧೨೫೦ ರಕ್ಕಿಂತ ಈಚೆಯವನೆಂತಲೂ, ಕ್ರಿ. ಶ. ೧೬೬೭ ರಲ್ಲಿ ಷಡಕ್ಷರದೇವನು ಇವನನ್ನು ಸ್ತುತಿಸುವದರಿಂದ ಇವನು ಆ ಕಾಲದ ಹಿಂದೆ ಇದ್ದಿರಬೇಕೆಂದೂ" ಅಂದು ನಿಜಗುಣ ಶಿವಯೋಗಿಯ ಕಾಲವನ್ನು ಕ್ರಿ. ಶ. ೧೫೦೦ ಎಂದು ಅಂದಿರುವರು. ಕವಿಚರಿತೆಕಾರರು ಅಮಲಾನಂದನ ಕಾಲವನ್ನು ಕ್ರಿ. ಶ. ೧೨೫೦ ಎಂದು ಸರಾಸರಿಯಾಗಿ ಗ್ರಹಿಸಿ ಇದಕ್ಕೆ ಯಾವ ಆಧಾರಗಳನ್ನು ಕೊಟ್ಟಿಲ್ಲ. ಇದು ಅಲ್ಲದೆ ಷಡಕ್ಷರದೇವ (ಕ್ರಿ. ಶ. ೧೬೬೫) ನ ಹೊರ್ತಾಗಿ ಹಿಂದೆ ಯಾರೂ ಸ್ತುತಿಸಿದ್ದನ್ನು ಹೇಳದೆ ಹಿಂದುಮುಂದೆ ೨೫೦ ವರ್ಷಗಳನ್ನು ಬಿಟ್ಟು ನಿಜಗುಣಶಿವಯೋಗಿಯ ಕಾಲವನ್ನು ಕ್ರಿ. ಶ. ೧೫೦೦ ಎಂದು ಅನ್ನುವದು ಕೇವಲ ತಪ್ಪು ಅನಿಸುತ್ತದೆ. ಇದಕ್ಕಿಂತಲೂ ಮಿ॥ ಎಡ್ವರ್ಡ ಪಿ. ರಾಯಿಸ್. ಬಿ. ಎ. ಇವರು ಕ್ರಿ. ಶ. ೧೯೨೧ ರಲ್ಲಿ ಬರೆದ ತಮ್ಮ ಕನ್ನಡ ವಾಙ್ಮಯದ ಇತಿಹಾಸದ ೭೧ ನೇ ಪುಟದಲ್ಲಿ "ಈ ನಿಜಗುಣ ಶಿವಯೋಗಿಯ ಕಾಲವು ಕ್ರಿ. ಶ. ೧೨೫೦—೧೬೬೫ ರ ಮಧ್ಯದಲ್ಲಿರಬೇಕು.

ಅದನ್ನು ಖಂಡಿತವಾಗಿ ಹೇಳಲಿಕ್ಕೆ ಬರಲಾರದು" ಎಂದು ಅಂದು ಇದು ಬಹಳೇ ಸಯುಕ್ತಿಕ ಎಂದು ಅಂದಿರುವರು. ಆದರೆ ವಿ॥ ಎಡ್ವರ್ಡರಾಯಿಸ್ ಇವರು ಸಹ ಕ್ರಿ. ಶ. ೧೨೫೦ ರಕ್ಕಿಂತಲೂ ಹಿಂದೆ ಹೋಗಲಾರರು, ಮತ್ತು ಡಾಕ್ಟರ ಕೇತಕರ ಇವರು ತಮ್ಮ ಮಹಾರಾಷ್ಟ್ರ ಜ್ಞಾನ ಕೋಶ, ಭಾಗ ೧೦-೧೧, (ಕ) ಅಕ್ಷರ, ಪುಟ ೩೦೬ ರಲ್ಲಿ "೧೭ ನೇ ಶತಮಾನದ ಮಧ್ಯದಲ್ಲಿ ನಿಜಗುಣಯೋಗಿಯೆಂಬವನೊಬ್ಬ ವಿದ್ವಾನ ಲಿಂಗಾಯತ ಲೇಖಕನಾಗಿ ಹೋದನು. ಅವನು ವಿವೇಕ ಚಿಂತಾಮಣಿ (ಚಂಪು) ಶೈವವಿದ್ಯೆಯ ಒಂದು ಪ್ರಕಾರದ ಜ್ಞಾನಕೋಶ ಕೈವಲ್ಯ ಪದ್ಧತಿ, ತಾತ್ವಿಕ ವಿಷಯದ ಮೇಲಿನ ಪದಗಳು ಪುರಾತನ ತ್ರಿವಿಧಿ, ೬೩ ಪುರಾತನರ (ಶೈವಸಾಧುಗಳ) ತ್ರಿಪದಿ ಛಂದಸ್ಸದಲ್ಲಿಯ ವರ್ಣನೆ, ಪಾರಮಾರ್ಥಗೀತೆ ಮತ್ತು ಪರಮಾನುಭವಬೋಧೆ ಈ ಗ್ರಂಥಗಳನ್ನು ಬರೆದನು" ಎಂದು ಅಂದಿರುವರು. ಇದರ ಮೇಲಿಂದ ನೋಡಲಾಗಿ ಈ ಮೂರು ಗ್ರಂಥಕರ್ತೃಗಳಲ್ಲಿ ಕಿಂಚಿತ್ತಾದರೂ ಮೇಳವಿಲ್ಲೆಂದು ವಾಚಕರಿಗೆ ಸಹಜ ಲಕ್ಷದಲ್ಲಿ ಬರಬಹುದು.

ವಿವೇಕ ಚಿಂತಾಮಣಿಯ ಆಚ್ಛಾದ ಪ್ರತಿಯೊಳಗಿನ ಉತ್ತರ ಮೀಮಾಂಸಾ ಎಂಬ ಶಿರೋಲೇಖದ ಕೆಳಗೆ "ವಾಚಸ್ಪತಿ ಮಿತ್ರನು ಶಾಂಕರ ಭಾಷ್ಯದ ತಾತ್ಪರ್ಯ ಭೋದಕ ಭಾಮಿತಿ ನಾಮಕ ವ್ಯಾಖ್ಯಾನವನ್ನು ಬರೆದಿರುವನೆಂದೂ, ಈ ಭಾಮಿತಿ ವ್ಯಾಖ್ಯಾನಕ್ಕೆ ಕಲ್ಪತರು ವ್ಯಾಖ್ಯಾನವಿರುವದಲ್ಲದೆ ಈ ಕಲ್ಪತರುವಿಗೆ ಕೌಸ್ತುಭನಾಮಕ ಟೀಕೆ" ಎಂದು ಇರುವದು. ಇದರಲ್ಲಿ ಕಲ್ಪತರು ಹಾಗು ಕೌಸ್ತುಭ ಗ್ರಂಥಗಳ ಗ್ರಂಥಕರ್ತರ ಹೆಸರು ಹೇಳಿಲ್ಲ. ಹೀಗಿರಲು ಈ ಕಲ್ಪತರು ವ್ಯಾಖ್ಯಾನವನ್ನು ಅಮಲಾನಂದನೇ ಬರೆದಿರುವನೆಂದು ಹೇಳಲಿಕ್ಕಾಗದು. ಇರಲಿ. ಹಳೇ ತಾಡವಾಲೀ ಗ್ರಂಥಗಳಲ್ಲಿ ಭಾಮಿತಿ ಕರ್ತೃವಾದ ವಾಚಸ್ಪತಿ ಮಿತ್ರನ ನಾಮನಿರ್ದೇಶವಾದರೂ ಕಂಡುಬರುವದಿಲ್ಲ. ಆದುದರಿಂದ ಈ ಸಂಗತಿಯು ಆಚ್ಛಾದ ವಿವೇಕಚಿಂತಾಮಣಿಯಲ್ಲಿ ಕ್ಷೇಪಕ ಅಂದರೆ ಹಿಂದಿನಿಂದ ಸೇರಿಸಿರಬಹುದೆಂದು ಸ್ಪಷ್ಟವಾಗಿ ಕಂಡುಬರುತ್ತದೆ. ಇದೂ ಅಲ್ಲದೆ ಕೊಡಗು ಪ್ರಾಂತದ ದೊರೆಯಾದ ಲಿಂಗರಾಜನೆಂಬವನು ವಿವೇಕಚಿಂತಾಮಣಿಯೊಳಗಿನ ಪ್ರಥಮ ಪ್ರಕರಣದ ಭಾಷಾಂತರವನ್ನು ಸಂಸ್ಕೃತದಲ್ಲಿ ಮಾಡಿರುವದರಿಂದ ಆ ಪ್ರಕರಣಕ್ಕೆ ಲಿಂಗರಾಜೀಯ ಎಂದು ಹೆಸರು

ಬಂದಿದೆ. ಇದರೊಳಗಿನ ಸೂತ್ರವಿಚಾರದಲ್ಲಿಯೂ ಕೂಡ ಈ ಕಲ್ಪತರು ಗ್ರಂಥದ ನಾಮನಿರ್ದೇಶವೂ ಇಲ್ಲ. ಆದರಂತೆ ಸುಮಾರು ಎರಡನೂರು ವರ್ಷಗಳ ಪೂರ್ವದಲ್ಲಿ ಶಾಂತೇಶ್ವರನೆಂಬ ಒಬ್ಬ ವೀರಶೈವ ಕವಿಯು ಈ ವಿವೇಕ ಚಿಂತಾಮಣಿಯನ್ನು ಮರಾಠಿಯಲ್ಲಿ ಓವೀಬದ್ಧವಾಗಿ ಭಾಷಾಂತರ ಮಾಡಿರುವನು. ಇದರ ಸೂತ್ರ ವಿಚಾರದಲ್ಲಿಯೂ ಕೂಡ ಕಲ್ಪತರು ಮೊದಲಾದ ಗ್ರಂಥಗಳ ಹೆಸರು ಕಂಡುಬರುವದಿಲ್ಲ. ಆದರೆ ಇತ್ತೀಚಿಗೆ ಅಚ್ಚಾದ ಗ್ರಂಥಗಳಲ್ಲಿ ಮಾತ್ರ ಭಾಮಿತಿ ಕಲ್ಪತರು ಮೊದಲಾದ ಗ್ರಂಥಗಳ ಹೆಸರು ಕಂಡುಬರುತ್ತವೆ. ಈ ಅಚ್ಚಾದ ಗ್ರಂಥದೊಳಗಿನ ಹೆಚ್ಚಿನ ವಿಷಯವನ್ನೇ ಪುನಃ ಓವೀಬದ್ಧ ಮರಾಠಿಯಲ್ಲಿ ಭಾಷಾಂತರ ಮಾಡಿಸಿ ಕೈಲಾಸವಾಸಿ ರಾ॥ ಬಾ॥ ವಾರದ ಅಪ್ಪಾಸಾಹೇಬರು ಪ್ರಕಟ ಮಾಡಿರುವರು. ಆದುದರಿಂದ ತಾಡವಾಲೀ ಗ್ರಂಥದಲ್ಲಿ ಇರದಂಥ ಸಂಗತಿಯು ಅಚ್ಚಾದ ವಿವೇಕ ಚಿಂತಾಮಣಿಯಲ್ಲಿ ಬಂದದ್ದು ಕ್ಷೇಪಕ ಅಂದರೆ ಹಿಂದಿನಿಂದ ಸೇರಿಸಿದ್ದು ನಿಜವಿರುತ್ತದೆಂದು ವಾಚಕರ ಮನವರಿಕೆಯಾಗದೆ ಇರಲಾರದು. ಮೂಲ ಹಳೇ ತಾಡಪಾಲೀ ಗ್ರಂಥಗಳಲ್ಲಿ ಶಂಕರಾಚಾರ್ಯನ ಭಾಷ್ಯೆಗೆ ವಿವರ್ಣಾಚಾರ್ಯನು ವಿವರಣೆ ಮಾಡಿದನು ಎಂಬದರ ವರೆಗೆ ಇರುತ್ತದೆ. ಇದರ ಅನುಕರುಣವನ್ನೇ ಲಿಂಗರಾಜೀಯ ಮತ್ತು ಶಾಂತೇಶನ ಮರಾಠಿ ವಿವೇಕಚಿಂತಾಮಣಿಗಳಲ್ಲಿ ಮಾಡಿದಂತೆ ಕಂಡುಬರುತ್ತದೆ. ಇದರ ಮುಂದಿನ ಸಂಗತಿಯು ಅಂದರೆ ಶಂಕರಾಚಾರ್ಯನ ಶಿಷ್ಯರು ಶಾಂಕರ ಭಾಷ್ಯೆಗೆ ವೃತ್ತಿಪಂಚಪಾದಿಕಾ, ಬ್ರಹ್ಮವಿದ್ಯಾಭರಣ, ರಾಮಾನಂದೀಯ ಮೊದಲಾದ ಗ್ರಂಥಗಳನ್ನು ಬರೆದರೆಂದೂ, ಅವಕ್ಕೆ ಅವರ ಶಿಷ್ಯರಾದ ವಾಚಸ್ಪತಿ ಮಿತ್ರರು ಭಾಮಿತಿ ನಾಮಕ ವ್ಯಾಖ್ಯಾನವನ್ನು ಬರೆದರೆಂದೂ ಈ ವ್ಯಾಖ್ಯಾನಕ್ಕೆ ಕಲ್ಪತರು, ಇದಕ್ಕೆ ಕೌಸ್ತುಭ ಎಂಬ ಟೀಕಾ ಗ್ರಂಥಗಳೂ ಹಿಂದಿನಿಂದ ವಿವೇಕಚಿಂತಾಮಣಿಯಲ್ಲಿ ಹಾಕಿದ್ದು ನಿಜವೆಂದೂ ತೋರುತ್ತದೆ. ಹೀಗಿರುತ್ತಿರಲು ಹಿಂದಿನಿಂದ ಸೇರಿಸಲ್ಪಟ್ಟಂಥ ಕಲ್ಪತರು ಮೊದಲಾದ ಗ್ರಂಥಗಳ ಹೆಸರಿನ ಆಧಾರದ ಮೇಲಿಂದ ಮತ್ತು ಹಳೇ ತಾಡವಾಲೀ ಗ್ರಂಥಗಳನ್ನು ನೋಡದೆ ಈ ನಿಜಗುಣ ಶಿವಯೋಗಿಯ ಕಾಲವು ಸುಮಾರು ಕ್ರಿ. ಶ. ೧೫೦೦ ಎಂದು ಗೊತ್ತುಮಾಡುವದು ಬಹಳೇ ಅಯುಕ್ತವಾಗಿ ಕಂಡುಬರುತ್ತದೆ. ಮಹಾರಾಷ್ಟ್ರ ಜ್ಞಾನಕೋಶಕಾರರಾದ ಡಾಕ್ಟರ ಕೇತಕರ ಇವರು ಈ ನಿಜಗುಣಶಿವಯೋಗಿಯ

ಕಾಲವನ್ನು ೧೭ ನೇ ಶತಮಾನದ ಮಧ್ಯವೆಂದು ಹಿಡಿದಿರುವರು. ಇವರಿಗೆ ಕನ್ನಡ ವಾಙ್ಮಯವೆಂಬ ಎರಡನೇಯವರ ಲೇಖಗಳೇ ಆಧಾರವಾಗಿದ್ದಂತೆ ಕಂಡುಬರುತ್ತದೆ. ಇನ್ನು ಕರ್ನಾಟಕ ಕವಿಚರಿತೆಕಾರರು ತಮ್ಮ ಕವಿಚರಿತೆಯ ಎರಡನೇ ಸಂಪುಟದಲ್ಲಿ "ನಿಜಗುಣಶಿವಯೋಗಿಯ ಗುರುವಾದ ಚನ್ನಸದಾಶಿವಯೋಗಿಯು ಶಿವಯೋಗಪ್ರದೀಪಿಕಾ ಎಂಬ ಗ್ರಂಥವನ್ನು ಬರೆದಿರುವನು. ಇದಕ್ಕೆ ಪಾರಮಾರ್ಥ ಪ್ರಕಾಶಿಕಾ ಎಂಬ ಹೆಸರಿನ ವ್ಯಾಖ್ಯಾನವನ್ನು ನಿಜಗುಣಶಿವಯೋಗಿಯು ಬರೆದಿರುವನು" ಎಂದು ಅಂದಿರುವರು. ಮತ್ತು ಈ ಚನ್ನಸದಾಶಿವನ ಕಾಲವು ತಿಳಿಯುವದಿಲ್ಲವು. ಅದು ತಿಳಿಯದ ಹೊರತು ನಿಜಗುಣಶಿವಯೋಗಿಯ ಕಾಲವನ್ನು ಗೊತ್ತುಮಾಡುವದು ಉಚಿತವಲ್ಲವೆಂದು ಅಂದಿರುವರು. ಈ ಮೇಲಿನ ವಿವೇಚನೆಯ ಮೇಲಿಂದ ನಿಜಗುಣಶಿವಯೋಗಿಯ ಕಾಲವು ಕ್ರಿ. ಶ. ೧೫೦೦ ಎಂಬುವದು ಗೊತ್ತುಮಾಡುವದು ಯೋಗ್ಯವಲ್ಲೆಂದೂ ಇದಕ್ಕೂ ಹಿಂದಿರಬಹುದೆಂದೂ ತೋರುತ್ತದೆ. ಏಕಂದರೆ ನಿಜಗುಣಶಿವಯೋಗಿಯು ವೀರಶೈವ ಕವಿಯಾಗಿದ್ದನು. ಈತನಿಗೆ ನಿಜಗುಣಾರಾಧ್ಯ ಎಂಬದು ಇನ್ನೊಂದು ಹೆಸರುಂಟು. ಇವನು ಶಂಭುಲಿಂಗನ ಬೆಟ್ಟದ ಸುತ್ತಲಿನ ಪ್ರಾಂತದ ರಾಜನಾಗಿದ್ದು ಆ ರಾಜ್ಯದ ತ್ಯಾಗವನ್ನು ಮಾಡಿ ವಿರಕ್ತನಾಗಿ ಅದೇ ಗುಡ್ಡದೊಳಗೆ ಶಿವಯೋಗತತ್ಪರನಾಗಿ ಇದ್ದನೆಂಬುದು ಇತಿಹಾಸಪ್ರಸಿದ್ಧವದೆ. ಇವನು ಬರೆದ ಷಟ್‌ಶಾಸ್ತ್ರಗಳಲ್ಲಿ ಶ್ರೀ ಬಸವಾದಿ ಪ್ರಮಥರ ನಾಮನಿರ್ದೇಶವು ಕಂಡುಬರುವದಿಲ್ಲ. ಇದೂ ಅಲ್ಲದೆ ಶ್ರೀ ಬಸವೇಶ್ವರನು ತನ್ನ ವಚನದಲ್ಲಿ ಈ ನಿಜಗುಣ ಶಿವಯೋಗಿಯನ್ನು ಹೊಗಳಿರುವನು. ಆದುದರಿಂದ ನಿಜಗುಣಶಿವಯೋಗಿಯು ಶ್ರೀ ಬಸವಾದಿ ಪ್ರಮಥರಗಿಂತಲು ಹಿಂದಿನವನೆಂಬುವದರಲ್ಲಿ ತಿಲಮಾತ್ರವೂ ಸಂಶಯವಿಲ್ಲವು ಎಷ್ಟು ಹಿಂದೆ ಇದ್ದಿರಬಹುದು ಎಂಬದು ಖಂಡಿತವಾಗಿ ಹೇಳಲಿಕ್ಕಾಗದು. ಇರಲಿ. ಇವನು ತನ್ನ ವಿವೇಕಚಿಂತಾಮಣಿಯಲ್ಲಿ ನಿರಾಭಾರಿ ಆಶ್ರಮದ ವರ್ಣನೆಯನ್ನು ಮಾಡಿ ಈ ನಿರಾಭಾರಿಗಳಲ್ಲಿ ಸ್ವಯ, ಚರ, ಪರ ಹೀಗೆ ಮೂರು ಭೇದಗಳು ಇವೆಯೆಂದು ವರ್ಣನೆ ಮಾಡಿರುವನು. ಈ ವಿರಕ್ತಾಶ್ರಮಕ್ಕೆ ಶ್ರೀ ಪ್ರಭುದೇವನು ಮುಖ್ಯ ಗುರುವಾದದ್ದು ಎಲ್ಲ ವಿರಕ್ತರಿಗೂ ಮಾನ್ಯವದೆ. ಆದುದರಿಂದ ಈ ನಿಜಗುಣ ಶಿವಯೋಗಿಯ ಕಾಲವು ಸುಮಾರು ಕ್ರಿ. ಶ. ೧೦೦೦ ಎಂದು ಹಿಡಿದರೆ ಇವನಿಗಿಂತಲೂ ಶ್ರೀ ಪ್ರಭುದೇವನು ಪೂರ್ವದಲ್ಲಿ ಇದ್ದದ್ದು ಸಹಜವೆಂದು ಕಂಡುಬರುತ್ತದೆ.

ಶಾಲಿವಾಹನ ಶಕೆ ೭೮೬ ರಲ್ಲಿ ಪ್ರಭುದೇವನು ಕಲ್ಯಾಣಕ್ಕೆ ಬಂದು ಕಲಿಗತ ವರ್ಷ ೪೦೦೧, ಶಾಲಿವಾಹನ ಶಕೆ ೮೨೨ ರೌದ್ರಿನಾಮಸಂವತ್ಸರ ದಲ್ಲಿ ಚನ್ನಬಸವನಿಗೆ ಶೂನ್ಯಸಿಂಹಾಸನದ ಅಧಿಕಾರವನ್ನು ಕೊಟ್ಟು ಸರ್ವ ಪ್ರಥಮಗಣಂಗಳಿಗೆ ದರ್ಶನ ಆಶೀರ್ವಾದವನ್ನಿತ್ತು ಮುಂದೆ ನಡೆದನೆಂದು ಚಿತ್ರಕಲ್‌ದುರ್ಗ ಪಟ್ಟವಲ್ಲರಿ ಪ್ರಸ್ತಾವನೆಯ ೬ ನೇ ಪುಟದಲ್ಲಿ ಹೇಳಿರು ವದು. ಇದರ ಮೇಲಿಂದ ಪ್ರಭುದೇವನ ಕಾಲವು ಕ್ರಿ. ಶ. ೯೦೦ ಕ್ಕಿಂತಲೂ ಹಿಂದೆ ಹೋಗುವದು.

ವಿರೂಪಾಕ್ಷ ಪಂಡಿತಕೃತ ಚೆನ್ನಬಸವ (೧೫೮೪) ಪುರಾಣದ ಕಾಂಡ ೫, ಸಂಧಿ ೯, ೧೮ ನೇ ಪದದಲ್ಲಿ "ಬಸವನು ಶಾಲಿವಾಹನ ಶಕೆ ೭೦೭ ರಕ್ತಾಕ್ಷಿನಾಮಸಂವತ್ಸರದಲ್ಲಿ ಐಕ್ಯನಾದನೆಂದು" ಹೇಳಿದೆ. ಇದರಮೇಲಿಂದ ಪ್ರಭುದೇವನ ಕಾಲವು ಸುಮಾರು ಕ್ರಿ. ಶ. ೮೦೦ ಆಗುತ್ತದೆ.

ಡಾಕ್ಟರ ಶ್ರೀಧರ ವೆಂಕಟೇಶ ಕೇತಕರಕೃತ ಮಹಾರಾಷ್ಟ್ರ ಜ್ಞಾನ ಕೋಶ, ಭಾಗ ೧೨, ಪುಟ ೨೨೭ ರಲ್ಲಿ "ಗೋರಖನಾಥನು ಕಾನಫಾಟಿ ಯೋಗೀ ಪಂಥದ ಸಂಸ್ಥಾಪಕನೆಂದು ತಿಳಿಯಲ್ಪಡುತ್ತಾನೆ. ಗೋರಕ್ಷ ನಾಥ ಎಂಬ ಸಂಸ್ಕೃತ ಹೆಸರಿನ ಹಿಂದೀ ರೂಪವು ಗೋರಖನಾಥ ಎಂದು ಆಗಿದೆ. ಇವನ ಕಾಲವು ನಿಶ್ಚಿತವಾಗಿಲ್ಲವು ಯಾಕಂದರೆ ಇವನ ಸಂಬಂಧ ವಾಗಿ ಪ್ರಚಾರದಲ್ಲಿದ್ದಂಥ ಅನೇಕ ಆಖ್ಯಾಯಿಕೆಗಳಲ್ಲಿ ಒಂದಕ್ಕೊಂದು ಮೇಳ ಇಲ್ಲದಂತೆ ಎಷ್ಟೋ ವಿಸಂಗತ ಸಂಗತಿಗಳು ಕಂಡುಬರುತ್ತವೆ. ನೇಪಾಳದೊಳಗೆ ೭ ನೇ ಶತಮಾನದಲ್ಲಿ ಆಗಿಹೋದ ನರೇಂದ್ರದೇವರಾ ಜನ ಕೂಡ ಈತನ ಸಂಬಂಧವನ್ನು ಹೊಂದಿಸುವರು, ಆದರೆ ಇವನು ಉತ್ತರ ಹಿಂದುಸ್ತಾನದಲ್ಲಿ ೧೫ ನೇ ಶತಮಾನದೊಳಗೆ ಇದ್ದಂಥ ಕಬೀರನ ಸಮಕಾಲೀನ ಪ್ರತಿಸ್ಪರ್ಧಿಯು ಎಂದು ತಿಳಿಯುವರು. ಮತ್ತು ಪಶ್ಚಿಮ ಹಿಂದುಸ್ತಾನದಲ್ಲಿ ೧೪ ನೇ ಶತಮಾನದ ಕಡೆಯ ಭಾಗದೊಳಗೆ ಕಚ್ಛ ದಲ್ಲಿ ಕಾನಫಾಟಿಯೆಂಬ ಪಂಥವನ್ನು ಆರಂಭಮಾಡಿದ ಧರ್ಮನಾಥನ ಗುರುವಿನ ಮಾನವನ್ನು ಈ ಗೋರಕ್ಷನಾಥನಿಗೆ ಕೊಡುವರು. ಗೋರಖ ನಾಥನ ಅಲ್ಪ ಚರಿತ್ರ ಮತ್ತು ಮಹಾರಾಷ್ಟ್ರಕ್ಕೆ ಆತನ ಸಂಬಂಧ ಎಂಬು ವದರಲ್ಲಿ ಇವನು ಮಚ್ಛೇಂದ್ರನಾಥನ ಶಿಷ್ಯನಾಗಿದ್ದನು. ಇವನು ಜಾತಿ ಯಿಂದ ಬ್ರಾಹ್ಮಣನು. ಆಕಳ ಶಗಣಿಯ ಕಿಟ್ಟಿನಲ್ಲಿ ಉದ್ಭವಿಸಿದರಿಂದ ಈತನಿಗೆ ಗೋರಖನಾಥ ಎಂಬ ಹೆಸರು ಬಂದಿದೆ. ಈತನು ಮಚ್ಛೇಂದ್ರ

ನಾಥನನ್ನು ಸ್ತ್ರೀರಾಜ್ಯದೊಳಗಿಂದ ತಿರುಗಿ ಕರೆದುಕೊಂಡ ಬಂದ ಕಥೆಯು ಕೇಳಿಕೆಯಲ್ಲಿದೆ. ಈತನ ನಿತ್ಯ ವಾಸಸ್ಥಳವು ಗೋರಖಪೂರ ಜಿಲ್ಹೆಯೊಳಗಿನ ಗೋರಖಪೂರವೆಂಬ ಗ್ರಾಮದಲ್ಲಿ ಇತ್ತೆಂದು ಹೇಳುವರು. ಈತನು ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳಲ್ಲಿ ಬರೆದ ಎರಡು ಗ್ರಂಥಗಳು ಸಿಗುತ್ತವೆ. ವ್ರಜಭಾಷೆಯಲ್ಲಿಯೂ ಈತನು ಅಲ್ಪಸ್ವಲ್ಪ ಕಾವ್ಯರಚನೆಯನ್ನು ಮಾಡಿದ್ದು ಕಂಡುಬರುವದು. ರಸಾಯನ ಶಾಸ್ತ್ರದ ಮೇಲೆ ಗೋರಖಕಿಮಿಯಾಗಾರ ಎಂಬ ಹೆಸರಿನ ಒಂದು ಗ್ರಂಥವನ್ನು ಈತನು ಬರೆದಿರುವನು. ಮರಾಠಿಯಲ್ಲಿ ಇವನು ಬರೆದ ಅಮರನಾಥ ಸಂವಾದ ಎಂಬುದೊಂದು ಚಿಕ್ಕ ಗ್ರಂಥವೂ ಹಿಂದೀ ಭಾಷೆಯಲ್ಲಿ ಬರೆದ ಅನೇಕ ಸ್ಫುಟ ಕವಿತೆಗಳೂ ದೊರೆಯುತ್ತವೆ. ಇವನ ಕೆಲವು ವಾಕ್ಯಗಳನ್ನು ಗೋರಖಮತ ಎಂಬ ಹೆಸರಿನಿಂದ ಪ್ರಸಿದ್ಧಿಸಿರುವರು. ಈತನ ಶಿಷ್ಯನು ಗೈನೀನಾಥ, ಗೈನೀನಾಥನ ಶಿಷ್ಯನು ನಿವೃತ್ತಿನಾಥ (ಜ್ಞಾನೇಶ್ವರನ ಅಣ್ಣ) ಜೋತಿಷ್ಯದ ಮೇಲೆಯೂ ಈತನ ಕೆಲವು ಗ್ರಂಥಗಳು ಇರಬಹುದು. ಮೂಹೂರ್ತ ಮುಂತಾದವುಗಳ ಮೇಲೆ ಗೋರಖಮತವೆಂಬದೊಂದು ಸ್ವತಂತ್ರ ಮತವಿರುವದು. ಇವನು ನವನಾಥರೊಳಗಿನವನೊಬ್ಬನಿದ್ದು ಇವನ ಚರಿತ್ರವು ನವನಾಥ ಭಕ್ತಿಸಾರದಲ್ಲಿ ಹೇಳಿದೆ. ನೇಪಾಳವನ್ನು ಗೆದ್ದು ತಮ್ಮ ಕೈಯಲ್ಲಿ ಇಟ್ಟುಕೊಂಡಂಥ ಗುರಖಾ ಸಂಸ್ಥಾನಗಳಲ್ಲಿ ಗೋರಕ್ಷನಾಥನನ್ನು ಸಂರಕ್ಷಕದೇವರೆಂದು ತಿಳಿಯುವರು. ಪೂರ್ವದಲ್ಲಿ ನೇಪಾಳದ ಸಂರಕ್ಷಕ ದೇವರು ಮಚ್ಛೇಂದ್ರನಾಥನಿದ್ದು ಬರಬರುತ್ತ ಆತನ ಶಿಷ್ಯನಾದ ಗೋರಖನಾಥನು ಆ ಸ್ಥಾನದಲ್ಲಿರಬಹುದು. ತಿಬೇಟದಲ್ಲಿ ಗೋರಕ್ಷನಾಥನು ಒಬ್ಬ ಬೌದ್ಧ ಮಾಂತ್ರಿಕನೆಂದು ತಿಳಿಯುವರು. ಈ ಹೊತ್ತಿಗೂ ಹಿಂದುಸ್ತಾನದೊಳಗಿನ ಎಷ್ಟೋ ಭಾಗಗಳಲ್ಲಿ ಗೋರಖನಾಥನು ಸರ್ವಶಕ್ತಿಮಾನ್ ಪರಮೇಶ್ವರನೆಂದು ಎಣಿಸಲ್ಪಡುವನು. ಸತ್ಯ ಯುಗದಲ್ಲಿ ಪಂಜಾಬದಲ್ಲಿಯೂ, ತ್ರೇತಾಯುಗದಲ್ಲಿ ಗೋರಖಪೂರದಲ್ಲಿಯೂ, ದ್ವಾಪಾರ ಯುಗದಲ್ಲಿ ಹುರಮುಜಗ್ರಾಮದಲ್ಲಿಯೂ, ಹಾಗು ಕಲಿಯುಗದಲ್ಲಿ ಕಾಠೇವಾಡದಲ್ಲಿಯೂ ಅವತರಿಸಿ ಆ ಆ ಸ್ಥಾನಗಳಲ್ಲಿಯು ಗೋರಖಮಠದಲ್ಲಿ ಈತನು ವಾಸಿಸುತ್ತಿದ್ದನೆಂದು ಆತನ ಭಕ್ತರು ತಿಳಿಯುವರು. ಭರ್ತೃಹರಿರಾಜನಿಗೆ ಗೋರಕ್ಷನಾಥನು ಸನ್ಯಾಸ ದೀಕ್ಷೆಯನ್ನು ಕೊಟ್ಟಂತೆ ಒಂದು ಕಥೆಯನ್ನು ಹೇಳುವರು. ಕೆಲವು ಸ್ಥಳಗಳಲ್ಲಿ ಭರ್ತೃಹರಿರಾಜನ ಬದಲು ಗೋಪೀಚಂದನ ಹೆಸರು ಹೇಳುವರು. ಮರಾಠಿ, ಹಿಂದೀ, ಬಂಗಾಲೀ

ಗೌರಾಂಬೆಗೂ ಮಗನಾಗಿ ಹುಟ್ಟಿದನು. ಇವನ ಗುರು ಮಹೇಶ್ವರ ಗಣಾ
ಗ್ರಣಿಯಾದ ಆವಂತರಾರ್ಯನ ಶಿಷ್ಯ ರಾಜಮಂತ್ರಿಜ್ಞನಾದ ಕೋಟಿಪ
ಲ್ಯಾರಾಧ್ಯನು ಮಲ್ಲಿಕಾರ್ಜುನನು ವೆಲುನಾಡು ಚೋಳರಾಜನ ಆಸ್ಥಾ
ನಕ್ಕೆ ಹೋಗಿ ಅಲ್ಲಿ ಒಂದ ವಾದಿಗಳನ್ನು ಜಯಿಸಿ ಬೌದ್ಧ, ಜೈನ,
ಚಾರ್ವಾಕಾದಿ ಮತಗಳನ್ನು ನಿರಸನ ಮಾಡಿ ವೀರಶೈವಾಚಾರವನ್ನು ಸ್ಥಾಪಿ
ಸಿದನು. ಚೋಳನು ಈತನ ಕಣ್ಣನ್ನು ಕೀಳಿಸಲು ಈತನು ಅವನನ್ನು
ಶಾಪಿಸಿ ಆ ದೇಶವನ್ನು ಬಿಟ್ಟು ಅಮರಾರಾಮ ನಗರಕ್ಕೆ ಬಂದು ಅಲ್ಲಿ
ಗಣಸಹಸ್ರಸ್ತುತಿಯನ್ನು ಹೇಳಿ ಈಶ್ವರನ ಅನುಗ್ರಹದಿಂದ ಊರ್ಧ್ವನೇ
ತ್ರವನ್ನು ಪಡೆದನು. ಅಮರಾರಾಮನಗರಕ್ಕೆ ಬಂದು ನೆಲಸಿದುದರಿಂದ
ಈತನಿಗೆ ಅಮರಗುಂಡದ ಮಲ್ಲಿಕಾರ್ಜುನನೆಂಬ ಹೆಸರೂ ಉಂಟು.
ಬಸವನು ಕಳುಹಿಕೊಟ್ಟ ಭಸಿತವನ್ನು ಧರಿಸಿಕೊಳ್ಳಲು ಈತನಿಗೆ ಆಕ್ಷಣವೇ
ಕರ್ನಾಟಕಭಾಷೆ ಬಂದಿತು. ಆ ಭಾಷೆಯಿಂದ ಇಷ್ಟಲಿಂಗಸ್ತೋತ್ರವನ್ನೂ
ಬಸವಮಹಾತ್ಮ್ಯಗೀತೆಗಳನ್ನೂ ಮಾಡಿದನು. ಈತನು ಕಲ್ಯಾಣಕ್ಕೆ
ಹೋಗಿ ಬಸವನನ್ನು ನೋಡಬೇಕೆಂದು ಹೊರಟು ಹಾನುಗಲ್ಲಿಗೆ ಬಂದಾಗ
ದಾರಿಯಲ್ಲಿ ಒಬ್ಬ ಚರನು ಬಂದು "ಬಸವಂ ಕೂಡಲಸಂಗಮೇಶ್ವರನಲ್ಲಿ
ಅಡಗಿದಂ, ಬಿಜ್ಜಳನಂ ಶರಣರು ಕೊಂದರು" ಎಂದು ಹೇಳಲು, "ಬಸವಾ
ಬಯಲಾದೆಯಾ" ಎಂದು ಅಳಲಿ ಗೀತವನ್ನು ಹಾಡಿದನು. ಬಳಿಕ ಶ್ರೀ
ಗಿರಿಗೆ ಹೋಗಿ ಅಲ್ಲಿ ಶಿವೈಕ್ಯನಾದನು. ಈತನ ವಿಷಯವಾಗಿ ಪಂಡಿತ
ಚರಿತ್ರ, ಆರಾಧ್ಯಚರಿತ ಮೊದಲಾದ ಗ್ರಂಥಗಳು ಹುಟ್ಟಿವೆ.

"ಏಕೋರಾಮತಂದೆ — ಇವನು ಚನ್ನಮುದ್ರಾಪುರದ ಭಕ್ತರುದರ
ದಲ್ಲಿ ಜನಿಸಿದನು. ಘಂಟಾಕರ್ಣ ಗಣನಾಥಾಚಾರ್ಯನಿಂದ ಉಪದೇಶ
ವನ್ನು ಪಡೆದು ಶಿವಮಹತ್ವಾಧಿಕ್ಯಂ ಶಾಸ್ತ್ರ ಪ್ರವರ್ತಕನಾಗಿ ಶಿವಭಕ್ತರಿಗೆ
ಬೋಧಿಸಿದನು. ಅನೇಕ ವಾದಿಗಳನ್ನು ಜಯಿಸಿದನು. ಮುದ್ರಾಪು
ರದ ವೀರಭಾಸ್ಕರ ನೃಪತಿ ವೈಷ್ಣವ ಮತೋದ್ಧಾರಕನೂ ಷಟ್‌ಶಾಸ್ತ್ರ
ಪಾರಂಗತನೂ ಆದ ವ್ಯಾಸನೆಂಬ ವಿದ್ವಾಂಸನಿಗೆ ಮರ್ಯಾದೆ ಮಾಡಿದು
ದನ್ನು ತಿಳಿದು ಅವನನ್ನು ವಾದದಲ್ಲಿ ಸೋಲಿಸಿ ಅವನಿಗೆ ರಾಮನಾಥಾಚಾ
ರ್ಯನೆಂಬ ಹೆಸರನ್ನಿಟ್ಟನು. ಭೋಗಮಲ್ಲಿಕಾರ್ಜುನಲಿಂಗದಾಲಯಕ್ಕೆ
ಬಂದು ಆ ಲಿಂಗದಲ್ಲಿ ಅಡಗಿದನು

" ವಿಶ್ವೇಶ್ವರಾಚಾರ್ಯ — ನಮಗೆ ದೊರೆತ ವೀರಶೈವ ಗ್ರಂಥಗಳಲ್ಲಿ ಈತನ ಚರಿತವು ಎಲ್ಲಿಯೂ ವಿಸ್ತಾರವಾಗಿ ಹೇಳಿಲ್ಲ. ಸಿದ್ಧನಂಜೇಶನ (ಸು. ೧೬೫೦) ಗುರುರಾಜಚಾರಿತ್ರದಲ್ಲಿ " ಈಶ್ವರನೇ ಕಳಸದಾಚಾರ್ಯ ವಿಶ್ವೇಶ್ವರನಾಗಿ ಧರೆಯಂ ಪಾಲಿಪಿದಂ ' ಎಂನೂ ಈತನ ಶಿಷ್ಯಸು ಸದಾಶಿವಾಚಾರ್ಯ ಅಥವಾ ಪಂಚವಣ್ಣಿಗೆಯ ಸ್ವಾಮಿಯೆಂದೂ ಈತನ ಶಿಷ್ಯ ಪರಂಪರೆಯಲ್ಲಿ ಕೆಲವರು ರಾಜಪನ್ಮಾನಿತರಾಗಿದ್ದರೆಂದೂ ಹೇಳಿದೆ. ಚತುರಾಚಾರ್ಯ ಪುರಾಣದಲ್ಲಿ (೧೬೫೮) ಹಿಂದೆ ಹೇಳಿದ ನಾಲ್ಕು ಆಚಾರ್ಯರುಗಳ ಚರಿತ್ರವು ಮಾತ್ರ ವರ್ಣಿತವಾಗಿದೆ. " ಎಂದು ವರ್ಣನೆಯು ಅದೆ. ಮತ್ತು ವಿರೂಪಾಕ್ಷಪಂಡಿತಕೃತ ಚೆನ್ನಬಸವಪುರಾಣದಲ್ಲಿಯೂ ಹಾಗೂ ಷಡಕ್ಷರಕವಿಕೃತ ಗ್ರಂಥಗಳಲ್ಲಿಯೂ ಇದೇ ನಾಲ್ಕು ಆಚಾರ್ಯರುಗಳ ಸ್ತುತಿಯು ಅದೆ. ಆದುದರಿಂದ ಆಸ್ತಿಕ ಜನರು ಆಗಮಗಳಲ್ಲಿ ಹೇಳಿದಂತೆ ನಡಕೊಳ್ಳುವದು ಬಹಳೇ ಉತ್ತಮ ಮತ್ತು ಶ್ರೀಮದ್ ರೇಣುಕಾಚಾರ್ಯರು ಅಗಸ್ತ್ಯ ಮಹಾಋಷಿಗೆ ಬೋಧಿಸಿದಂಥ ಸಿದ್ಧಾಂತ ಶಿಖಾಮಣಿನಾಮಕ ಗ್ರಂಥವಲ್ಲಿ " ಮದೀಯಲಿಂಗಸಂಭೂತಂ । ಮತ್ಪ್ರಕೃತ್ತ ಪರಿಪಾಲಕಂ । ವಿಸ್ಮಿತಾ ಮಾನುಷಾಃ ಸರ್ವೇ । ತ್ವಾಂ ಭಜಂತು ಮದಾಜ್ಞಯಾ॥ " ಮತ್ತು ಸ್ವಾಯಂಭು ಆಗಮದ ಎಂಟನೆಯ ಪಟಲದಲ್ಲಿ " ಮಮ ಜಂಗಮಲಿಂಗೇನ । ಸಾಕಂ ಪಂಚಗಣಾಧಿಪಾಃ । ಆವಿರ್ಭೂತಾ ಮಹೀಭಾಗೇ । ಮದನುಜ್ಞಾನಸಾರತಃ ॥ ' ಎಂದು ಕೊಟ್ಟ ಆಧಾರಗಳ ಮೇಲಿಂದ ಶ್ರೀಮದ್ ರೇಣುಕಾದಿ ಪಂಚಾಚಾರ್ಯರು ಭೂಲೋಕದಲ್ಲಿ ಅವತರಿಸುವಾಗ್ಗೆ ಅವ್ಯಕ್ತರೂಪದಿಂದ ಇದ್ದಂಥ ಪರಶಿವನೊಡನೆ ಅವತರಿಸಿದಂತೆ ಕಂಡು ಬರುತ್ತದೆ. ವ್ಯಕ್ತರೂಪದೊಳಗಣ ವಸ್ತುಗಳಲ್ಲಿ ಬೇರೆ ವಸ್ತುಗಳು ಅವ್ಯಕ್ತರೂಪದಿಂದ ಇರಬಹುದು. ಇದಕ್ಕೆ ಪ್ರಮಾಣವೆಂದರೆ ಮನುಷ್ಯನ ಬಾಲ್ಯಾವಸ್ಥೆಯಲ್ಲಿ ಇಲ್ಲದಂಥ ಗಡ್ಡಮೀಸೆಗಳು ಅವನ ಯೌವ್ವನಾವಸ್ಥೆಯಲ್ಲಿ ಹೇಗೆ ಪ್ರಾದುರ್ಭವಿಸುತ್ತವೆಯೋ ಮತ್ತು ಬಾಲ್ಯಾವಸ್ಥೆಯಲ್ಲಿ ಇಲ್ಲದಂಥ ಸ್ತ್ರೀಯಳ ಕುಚಲಾವಣ್ಯಾದಿಗಳು ಅವಳ ಯೌವ್ವನಾವಸ್ಥೆಯಲ್ಲಿ ಹೇಗೆ ಪ್ರಕಟವಾಗುತ್ತವೆಯೋ ಹಾಗು ಬೀಜಗಳಲ್ಲಿ ಅವ್ಯಕ್ತರೂಪವಾಗಿ ಅಡಗಿಕೊಂಡಿದ್ದ ವೃಕ್ಷಗಳು ಹೇಗೆ ಕಾಲಾಂತರದಿಂದ ಪ್ರಕಟವಾಗುತ್ತವೆಯೋ ಅದರಂತೆಯೇ ಶ್ರೀ ಪರಶಿವಮೂರ್ತಿಯೂ ಅವ್ಯಕ್ತರೂಪದಿಂದ ಇರಬಲ್ಲನು. ತ್ರಿಕಾಲದಲ್ಲಿ ಇಲ್ಲದಂಥ ವಸ್ತುಗಳ ಉತ್ಪತ್ತಿಯು ಎಂದಿಗೂ ಆಗಲರಿಯದು ಆದುದರಿಂದ ನಂಪುಸಕನಿಗೆ ಸಂತಾನೋತ್ಪ

ತ್ತಿಯು ಆಗುವದಿಲ್ಲ. ಶಕ್ತಿರೂಪದಿಂದ ಅವ್ಯಕ್ತವಾಗಿ ಇದ್ದಂಥ ವಸ್ತುಗಳೇ ಬಹಿರಂಗಕ್ಕೆ ಬರುತ್ತವೆ. ಇಲ್ಲದಂಥ ವಸ್ತುಗಳು ಎಂದಿಗೂ ಹೊರಗೆ ಬರಲಾರವು. ಹಾಗೆ ಉತ್ಪತ್ತಿಯಾಗುತ್ತದೆಂದರೆ ಕಾರಣವಿಲ್ಲದೆ ಕಾರ್ಯೋತ್ಪತ್ತಿ ಆಯಿತೆಂಬಂತೆ ಅತಿಪ್ರಸಂಗ ದೋಷವು ಬರುವದು. ಆದುದರಿಂದ ಅವ್ಯಕ್ತರೂಪದಿಂದ ಇದ್ದಂಥ ನಿರಂಜನ ಜಂಗಮನ ಉತ್ಪತ್ತಿಯು ಪಂಚಾಚಾರ್ಯರ ಸಮಕಾಲಿನದೆಂಬುವದರಲ್ಲಿ ಏನೂ ಅಭ್ಯಂತರವಿಲ್ಲವು. ಇಲ್ಲವಾದರೆ ವೀರಶೈವ ಸಿದ್ಧಾಂತಕ್ಕೆ ಬಾಧೆ ಬರುವದು. ಆದುದರಿಂದ ಪಂಚಾಚಾರ್ಯರಗೋಸುಗ ವಿಶೇಷ ಪ್ರಸಂಗದಲ್ಲಿ ಈ ನಿರಂಜನ ಜಂಗಮನ ಉತ್ಪತ್ತಿಯಾಗುವದು ನಿಜವು. ಉತ್ತರವಾತುಲತಂತ್ರದಲ್ಲಿ “ಆದೌ ತಚ್ಚರಲಿಂಗಂ ತು । ನಿರಂಜನ ಇತಿ ಸ್ಮೃತಂ। ತ್ರೇತಾಯಾಂ ದೈವತಂ ಚೈತನ್ನಿರ್ಮಾಯ ಇತಿ ಕೀರ್ತಿತಂ । ದ್ವಾಪಾರೆ ನಿಷ್ಕಲಶ್ಚೈತಿ ವಿಶ್ರುತಂ ಚ ತದ್ವೈವ ಹಿ । ಕಲೌ ಪ್ರಭುರಿತಿ ಖ್ಯಾತಂ ತಸ್ಯ ನಾಮಾನಿ ವೈಕ್ರಮಾತ್ ॥ ಎಂದರೆ ಈ ಚರಲಿಂಗಕ್ಕೆ ಕೃತಯುಗದಲ್ಲಿ ನಿರಂಜನವೆಂತಲೂ ತ್ರೇತಾಯುಗದಲ್ಲಿ ನಿರ್ಮಾಯನೆಂತಲೂ, ದ್ವಾಪಾರಯುಗದಲ್ಲಿ ನಿಷ್ಕಲವೆಂತಲೂ ಮತ್ತು ಕಲಿಯುಗದಲ್ಲಿ ಪ್ರಭುವೆಂತಲೂ ಹೀಗೆ ಕ್ರಮವಾಗಿ ಹೆಸರುಗಳು ಬಂದಿವೆ” ಎಂದು ವರ್ಣನೆಯಿದೆ. ಈ ನಿರಜಂನ ವಿರಕ್ತ ಮೂರ್ತಿಗಳು ಪ್ರಭುಸಾಂಪ್ರದಾಯಕರೆಂದು ನಾವು ಹಿಂದೆ ಸಿದ್ಧಮಾಡಿದ್ದು ವಾಚಕರ ಲಕ್ಷದಲ್ಲಿ ಇರಬಹುದು.

ಈ ಪ್ರಭುಸಾಂಪ್ರದಾಯಕರಾದ ನಿರಂಜನ ಜಂಗಮಮೂರ್ತಿಗಳಲ್ಲಿ ಸ್ವಯ, ಚರ ಮತ್ತು ಪರ ಎಂದು ಮೂರು ಭೇದಗಳಿರುವವು. ವೀರಶೈವ ಸದಾಚಾರಸಂಗ್ರಹನಾಮಕ ಗ್ರಂಥದ ೧೫ನೆಯ ಪ್ರಕರಣದಲ್ಲಿ “ ಸ್ವಯ ಚರ ಪರ ಇತಿ। ಜಂಗಮೇಸ್ಮಿನ್ನಿರಂಜನೆ। ಅಸ್ತಿ ಭೇದತ್ರಯಂ ಸಮ್ಯಗ್ । ಜ್ಞಾತವ್ಯಂ ವಲ್ಲಭೆ ತ್ವಯಾ। ” ಎಂದು ಅಂದಿರುವ ಶ್ಲೋಕದ ಮೇಲಿಂದ ಇದನ್ನು ಮನಗಾಣಬಹುದು

## ಇನ್ನು ಸ್ವಯಜಂಗಮದ ಲಕ್ಷಣವು.

“ ಅಂಗೀಕೃತ್ಯ ಸದಾಚಾರಂ । ಧೃತ್ವಾ ಜಂಗಮಲಕ್ಷಣಂ ॥ ಜ್ಞಾತ್ವಾ ಸದ್ಧರ್ಮಮಖಿಲಂ । ಭೂತ್ವಾ ಸುಜ್ಞಾನವಾನ್ ಶುಚಿಃ ॥ ತ್ಯಕ್ತ್ವಾ ದುಷ್ಕರ್ಮನಿಚಯಂ । ಮುಕ್ತ್ವಾ ದೌರ್ಜನ್ಯಲಕ್ಷಣಂ ॥ ಹಿತ್ವಾ ದುಷ್ಟಮತಿಂ ಶಾಸ್ತ್ರಂ । ಮತ್ವಾ ಸದ್ವೇದಶೈವಕಂ ॥ ಮಠಮೇಕಂ ಸಮಾಶ್ರಿತ್ಯ ।

ಕೃತ್ವಾ ಸಲ್ಲಿಂಗಪೂಜನಂ ॥ ತತ್ಪುರಾಸ್ಥಿತಸದ್ಭಕ್ತ । ಗೃಹೇ ಭಿಕ್ಷಾಟನಂ ಮುದಾ ॥ ತದ್ಭಿಕ್ಷಾರ್ಜಿತ ಸದ್ದ್ರವ್ಯ । ಸ್ವಾಸ್ಥಾಂ ಹಿತ್ವಾ ನಿರಂತರಂ ॥ ಸಾವಧಾನಮನಾಃ ಸಮ್ಯಕ್ ॥ ಸಜ್ಞಾನಪರೋ ಭವೇತ್ ॥ ಗತಾಗತೇಶಭಕ್ತಾನಾಂ । ಚರಣಾವೌಪಚಾರಕಂ ॥ ಕುರ್ವಂತೋ ವಸತೆ ನಿತ್ಯಂ । ಸ ಏವ ಸ್ವಯಜಂಗಮಃ ॥ ”

ಇದರರ್ಥವು—ಸದಾಚಾರವನ್ನು ಸ್ವೀಕರಿಸಿ ಜಂಗಮನ ಚಿಹ್ನೆಗಳನ್ನು ಧರಿಸಿಕೊಂಡು ತನ್ನ ಶ್ರೇಷ್ಠವಾದ ಧರ್ಮದ ಎಲ್ಲ ಗುಟ್ಟನ್ನು ಅರಿತು ಜ್ಞಾನಿ ಹಾಗು ಪವಿತ್ರನಾಗಬೇಕು. ಎಲ್ಲ ಕಷ್ಟ ಕರ್ಮಗಳನ್ನು ತ್ಯಜಿಸಿ ದುರ್ಜನತನದ ಲಕ್ಷಣವನ್ನಾದರೂ ಬಿಟ್ಟು ಬಿಡಬೇಕು. ಕೆಟ್ಟ ಬುದ್ಧಿಯನ್ನು ಬಿಟ್ಟು ವೇದಗಳ ಹಾಗು ಶೈವಶಾಸ್ತ್ರಗಳ ಮನನ ಮಾಡಬೇಕು. ಒಂದು ಮಠದಲ್ಲಿ ನಿಂತು ಲಿಂಗಪೂಜಾಸಕ್ತನಾಗಿರಬೇಕು. ಆ ಊರೊಳಗಿನ ಸದ್ಭಕ್ತರ ಮನೆಗಳಿಂದ ಭಿಕ್ಷಾರೂಪದಿಂದ ಬಂದ ದ್ರವ್ಯದ ಆಶೆಯನ್ನು ಬಿಟ್ಟು ನಿರಂತರದಲ್ಲಿ ಸಾವಧಾನಮನಸ್ಸಿನಿಂದ ಸತ ಜ್ಞಾನದಲ್ಲಿಯೇ ಚನ್ನಾಗಿ ನಿರತನಾಗಿರಬೇಕು. ಹೋಗುಬರುವಂಥ ಶಿವಭಕ್ತರ ಆದರ ಸತ್ಕಾರವನ್ನು ಮಾಡಬೇಕು ಈ ಪ್ರಕಾರವಾಗಿ ಯಾವನು ನಿತ್ಯ ವರ್ತಿಸುವನೋ ಆತನಿಗೆ ಸ್ವಯಜಂಗಮನೆಂದೆನ್ನುವರು ( ಶ್ಲೋಕ ೧೮-೨೨ ) ಮತ್ತು ಛಾಂದೋಗ್ಯ ಶೃತಿಯ ೮ನೆಯ ಅಧ್ಯಾಯದ ೧೨ನೆಯ ಖಂಡದ ೩ನೆಯ ಶ್ಲೋಕದಲ್ಲಿ “ ಪರಂಜ್ಯೋತಿರೂಪ ಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೆ । ಸ ಉತ್ತಮಃ ಪುರುಷಃ ಸ ತತ್ರ ಪರ್ಯೇತಿ ” ಎಂದು ಹೇಳಿದೆ ಮತ್ತು ವಾತುಲೋತ್ತರ ವಚನದಲ್ಲಿ ‘ ಪ್ರಾಣಲಿಂಗಪರಿಜ್ಞಾನಾನಂದಃ ಶಿವಲಾಂಛನಃ । ಬಾಹ್ಯಕರ್ಮಪರಿತ್ಯಾಗೀ ಸ ಸ್ವಯಲಿಂಗ ಮುಚ್ಯತೆ॥ ” ಎಂದು ಹೇಳಿದೆ. ಮತ್ತು ಸಿದ್ಧಾಂತ ಶಿಖಾಮಣಿಯ ೧೫ನೆಯ ಪರಿಚ್ಛೇದದ ೨೨೬ ನೆಯ ಪುಟದೊಳಗಿನ ೫೨ ನೆಯ ಶ್ಲೋಕದಲ್ಲಿ “ ಸ್ವಚ್ಛಂದಾಚಾರಸಂತುಷ್ಟೋ ಜ್ಯೋತಿರ್ಲಿಂಗಪರಾಯಣಃ । ಆತ್ಮಸ್ಥಸಕಲಾಕಾರಃ ಸ್ವಾಭಿದ್ಯೋ ಮುನಿಸತ್ತಮಃ ॥ ” ಎಂದು ವರ್ಣನೆಯುದೆ. ಈ ಮೇಲಿನ ಎಲ್ಲ ಪ್ರಮಾಣಗಳ ಸಾರವನ್ನೇ ಶ್ರೀಮನ್ನಿಜಗುಣ ಶಿವಯೋಗಿಗಳು ತಮ್ಮ ವಿವೇಕಚಿಂತಾಮಣಿನಾಮಕ ಗ್ರಂಥದ ೩ನೆಯ ಪ್ರಕರಣದ ೧೩೭ನೆಯ ಪುಟದಲ್ಲಿ ದೇಶಭಾಷೆಯಲ್ಲಿ ಹೇಳಿ ಇದರ ವಿಶೇಷ ಸ್ಪಷ್ಟೀಕರಣವನ್ನು ಮಾಡಿರುವರು.

## ಇನ್ನು ಚರಜಂಗಮದ ಲಕ್ಷಣವು.

ವೀರಶೈವ ಸದಾಚಾರಸಂಗ್ರಹದ ೧೫ನೆಯ ಪ್ರಕರಣದ ೨೭-೩೧ ರ ವರೆಗಿನ ಶ್ಲೋಕಗಳಲ್ಲಿ “ ಷಟ್‌ಸ್ಥಲಾಚಾರಸಂಪತ್ತಿಂ । ಧೃತ್ವಾ ಹಿತ್ವಾಽಷ್ಟದುರ್ಮದಾನ್ ॥ ಷಡ್ವರ್ಗವಿಕ್ರಿಯಾಂ ತ್ಯಕ್ತ್ವಾ । ಕೃತ್ವಾ ಷಟ್‌ಕರ್ಮಭಂಜನಂ ॥ ಷಡೂರ್ಮಿಕಚಯಂ ನೀತ್ವಾ । ಭಿತ್ವಾ ಷಟ್‌ಭ್ರಮಣೋನ್ಮದಂ । ಷಡಕ್ಷರಮನುಂ ಜಪ್ತ್ವಾ । ಭೂತ್ವಾ ತದ್ವನ್ನಿರಂಜನಃ ॥ ಪಂಚಾಕ್ಷರಮನುಂ ಧ್ಯಾತ್ವಾ । ಪಂಚಕ್ಲೇಶಾನ್ ವಿಪಾಟಯನ್ ॥ ಪಂಚಯನ್ ಪಂಚತಾಂ ಸಮ್ಯಗ್ । ಜ್ಞಾನಂ ಸಂಪತ್ತಿವೈಭವಾತ್ ॥ ಮಲತ್ರಯತರುಂ ಛಿತ್ವಾ । ಧೂಲೀಕುರ್ವನ್ ಮದಾಚಲಂ ॥ ಛಿಂದನ್ ಪಾಶಾಷ್ಟಕಲತಾಂ । ಛಿಂದನ್ ವ್ಯಸನಸಪ್ತಕಂ ॥ ವೀರಮಾಹೇಶ್ವರಾಚಾರ । ಸಂಪದ್‌ವೃದ್ಧಿಂ ದಿನೇ ದಿನೇ । ಪಾಲಯಿತ್ವಾ ಪ್ರಾಣಸಮಂ । ಕಾಯವಾಙ್ಮನಸೈಃ ಪರಂ ॥ ಶೈವಾನುಭಾವಕಂ ಶಾಸ್ತ್ರ । ಮಂಗೀಕೃತ್ಯ ಪುರಾಶ್ರಯಂ ॥ ತದೋಪಾಖಿಲಶಿಷ್ಯಾಣಾ । ಮುಪದಿಶ್ಯ ದಿನೇ ದಿನೇ ॥ ತದಂತಸ್ಥಮಲಂ ಕ್ಷಾಲ್ಯ । ಕೃತ್ವಾ ತಾನಖಿಲಾನ್ ಶುಚೀಃ ॥ ತೈಃ ಸಮಂ ನಿಖಿಲಾನ್ ದೇಶಾನ್ । ಸಂಚರನ್ ಶುದ್ಧಭಾವತಃ ॥ ತದ್ದೇಶಸ್ಥಮಹಾಭಕ್ತ । ಸಹಸ್ರೈಃ ಕೃತಪೂಜನಂ ॥ ಸ್ವೀಕುರ್ವನ್ ನೋಪತಿಷ್ಠೇಽಬಾಧಂ । ಪಾವಯನ್ ಸ್ವಾನ್ ಮಹಾಜನಾನ್ ॥ ಕಾಂಶ್ಚಿತ್ಸ್ಪರ್ಶನಮಾತ್ರೇಣ । ಕಾಂಶ್ಚಿದಂಘ್ರಿಸವಿಲಾಪನಾತ್ । ಹಸ್ತಸ್ಪರ್ಶನತಃ ಕಾಂಶ್ಚಿ । ತ್ಪಾವಯನ್ ಪ್ರಾಣಿಸಂಯೋಗೇನ ॥ ಏವಂರೀತ್ಯಾ ಭಕ್ತಭಿಕ್ಷಾಂ । ಸ್ವೀಕುರ್ವನ್ ಸಂಚರನ್ ಸದಾ । ಚರಪಟ್ಟಾಧಿಕಾರೀ ಯಃ । ಸ ಏವ ಚರಜಂಗಮಃ ॥ ” ಇದರರ್ಥವು—ಷಟ್‌ಸ್ಥಲಾಚಾರಸಂಪತ್ತಿಯನ್ನು ಹೊಂದಿ ಅಷ್ಟಮದಗಳನ್ನು ಬಿಡಬೇಕು. ಷಡ್ವರ್ಗದ ದುಷ್ಟಕ್ರಿಯೆಗಳನ್ನು ತ್ಯಜಿಸಿ ಷಟ್ಕರ್ಮಗಳನ್ನು ನಾಶಗೊಳಿಸಬೇಕು. ಷಡೂರ್ಮಿಗಳನ್ನು ದೂರೀಕರಿಸಿ ಆರು ಪ್ರಕಾರದ ಉನ್ಮಾದಗಳನ್ನು ಇಲ್ಲದಂತೆ ಮಾಡಿ ಷಡಕ್ಷರ ಮಂತ್ರವನ್ನು ಜಪಿಸಬೇಕು ಮತ್ತು ಉಪಾಧಿರಹಿತನಾಗಬೇಕು ಪಂಚಾಕ್ಷರೀಮಂತ್ರದ ಜಪವನ್ನು ಮಾಡಿ ಐದು ಪ್ರಕಾರದ ಕ್ಲೇಶಗಳನ್ನು ಕಿತ್ತೊಗೆಯಬೇಕು. ಸತ್ಯಜ್ಞಾನವೆಂಬ ಐಶ್ವರ್ಯದಿಂದ ಮಾಯೆಯನ್ನು ಮೋಸಗೊಳಿಸಬೇಕು. ಮಲತ್ರಯರೂಪೀ ಗಿಡವನ್ನು ಕಡೆದು ಮದವೆಂಬ ಪರ್ವತವನ್ನು ಒಡೆಯಬೇಕು. ಅಷ್ಟಪಾಶಗಳೆಂಬ ಬಳ್ಳಿಗಳನ್ನು ಕಿತ್ತು ಸಪ್ತವ್ಯಸನಗಳನ್ನು ಇಲ್ಲದಂತೆ ಮಾಡಿ

ಬೇಕು. ವೀರಮಾಹೇಶ್ವರರ ಆಚಾರವೆಂಬ ಸಂಪತ್ತಿಯನ್ನು ಪ್ರಾಣದಂತೆ ಉತ್ತಮರೀತಿಯಿಂದ ಪ್ರತಿದಿನವು ಕಾಯಾವಾಚಾ ಮನಸಾ ಸಂರಕ್ಷಿಸಬೇಕು. ಶಿವನ ಮಹಿಮೆಯನ್ನು ಹೇಳುವ ಶಾಸ್ತ್ರಗ್ರಂಥಗಳನ್ನು ಅಂಗೀಕರಿಸಿ ಎಲ್ಲ ಶಿಷ್ಯರಿಗೆ ದಿನಂಪ್ರತಿ ಅವುಗಳ ಉಪದೇಶ ಮಾಡಬೇಕು. ಮತ್ತು ಇದರಿಂದ ಅವರ ಮನದ ಮೈಲಿಗೆಯನ್ನು ತೊಳೆದು ಅವರನ್ನು ಶುದ್ಧಗೊಳಿಸಬೇಕು. ಭಕ್ತರೊಡನೆ ಶುದ್ಧಭಾವದಿಂದ ಸರ್ವ ದೇಶಗಳಲ್ಲಿ ಸಂಚರಿಸಬೇಕು. ಆ ಆ ದೇಶಗಳ ಮಹಾನ್ ಮಹಾನ್ ಭಕ್ತರು ಮಾಡಿದ ಪೂಜೆಯನ್ನು ಸ್ವೀಕರಿಸಿ ಆ ಭಕ್ತರನ್ನು ಪಾವನಗೊಳಿಸಬೇಕು. ಕೆಲವರಿಗೆ ದರ್ಶನದಿಂದಲೂ ಕೆಲವರಿಗೆ ಹಸ್ತಸ್ಪರ್ಶನದಿಂದಲೂ ಪಾವನಗೊಳಿಸಬೇಕು. ಈ ಪ್ರಕಾರ ಭಕ್ತಭಿಕ್ಷೆಯನ್ನು ಅಂಗೀಕರಿಸಿ ಸದಾ ಸಂಚಾರದಿಂದಿರುವ ಚರಪಟ್ಟಾಧಿಕಾರಿಯೇ ಚರಜಂಗಮನೆಂದು ಹೇಳಿದೆ ಮತ್ತು ಛಾಂದೋಗ್ಯಶೃತಿಯ ೭ನೆಯ ಅಧ್ಯಾಯದ ೨೫ನೆಯ ಖಂಡದ ೨ನೆಯ ಶ್ಲೋಕದಲ್ಲಿ "ಆತ್ಮರತಿರಾತ್ಮಕ್ರೀಡ ಆತ್ಮಮಿಥುನ ಆತ್ಮಾನಂದಃ ಸ ಸ್ವರಾಟ್ । ಭವತಿ ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವಂತಿ" ಎಂದು ಹೇಳಿದೆ ಇದರಂತೆ ವಾತುಲೋತ್ತರ ವಚನದಲ್ಲಿ "ಅಹಂಮಮತ್ವರೂಪಾತ್ಮಾ ನಿಜಬೋಧೈಕರೂಪಧೃಕ್ ಸ್ವಯಮೇವ ಸ್ವಯಂಭೂತ್ವಾ ಚರತೀತಿ ಚರಃ ಸ್ಮೃತಃ' ಎಂದು ವರ್ಣನೆಯಿದೆ ಮತ್ತು ಸಿದ್ಧಾಂತ ಶಿಖಾಮಣಿಯ ೧೩ನೆಯ ಪರಿಚ್ಛೇದದ ೨೨೭-೨೨೮ ನೆಯ ಪುಟಗಳೊಳಗಿನ ೫೭-೫೮ ನೆಯ ಶ್ಲೋಕಗಳಲ್ಲಿ "ಸ್ವಸ್ವರೂಪಜ್ಞಾನಸಂಪನ್ನೋ ಧ್ವಸ್ತಾಹಂಮಮತಾಕೃತಿಃ । ಸ್ವಯಮೇವ ಸ್ವಯಂಭೂತ್ವಾ ಚರತೀತಿ ಚರಾಭಿದಃ ॥ ಕಾಮಕ್ರೋಧಾದಿನಿರ್ಮುಕ್ತಃ ಶಾಂತಿದಾಂತಿಸಮನ್ವಿತಃ । ಸಮಬುದ್ಧ್ಯಾ ಚರೇದ್ಯೋಗೀ ಸರ್ವತ್ರ ಶಿವಬುದ್ಧಿಮಾನ್" ಎಂದು ಹೇಳಿದೆ ಈ ಮೇಲಿನ ಎಲ್ಲ ಆಧಾರಗಳ ಸಾರವನ್ನೇ ಶ್ರೀಮನ್ ನಿಜಗುಣಶಿವಯೋಗಿಗಳು ತಮ್ಮ ವಿವೇಕಚಿಂತಾಮಣಿಯ ೨ನೆಯ ಪ್ರಕರಣದ ೧೩೧ನೆಯ ಪುಟದಲ್ಲಿ ಕೊಟ್ಟು ಈ ವಿಷಯವಾಗಿ ಚನ್ನಾಗಿ ವಿವರಿಸಿರುವರು.

## ಇನ್ನು ಪರಜಂಗಮಲಕ್ಷಣವು

"ತೃಣಂ ಬ್ರಹ್ಮಾ ತೃಣಂ ವಿಷ್ಣು । ಸ್ತೃಣಾನೀಂದ್ರಾದಿದೇವತಾಃ ॥ ತೃಣಾನ್ಯಷ್ಟ ಮಹಾಭಾಗಾ । ಸ್ತೃಣಾನ್ಯಷ್ಟ ವಿಭೂತಯಃ ॥ ಸಿದ್ಧ

ಯೋಽಷ್ಟೌ ತೃಣಾನ್ಯನ್ಯೇ । ಭೋಗಾಽಪಿ ತೃಣೋಪಮಾಃ ॥ ಚತು ರ್ವಿಧಪದಾನ್ಯೇವಂ । ತೃಣಾನಿ ತ್ರಿಜಗಂತಿ ಚ ॥ ಲೋಕಸ್ಥಿತಾಽಬಲಾ ಮುಖ್ಯ । ಮಹಾಭೋಗಾಸ್ತೃಣಾನಿ ವೈ ॥ ಸ್ವರ್ಣಾಲಂಕಾರಮುಖ್ಯಾನಿ। ತೃಣಾನೀತಿ ನಿರಾಶಯಾ ॥ ಮತ್ವೈತಾನಿ ಚ ವಸ್ತೂನಿ । ನಿರಸ್ಯೇತರ ಸಂಪದಃ ॥ ಯತ್ರ ಯತ್ರ ಸ್ಪೃಹಾಸ್ಪರ್ಯ । ಸ್ತತ್ರ ತತ್ರೈವ ಸಂಚ ರನ್ ॥ ಶ್ರೀಖಂಡಪಂಕಯೋರ್ನಲ್ಲಿ । ಸುಮಬರ್ಬರಪುಷ್ಪಯೋಃ ॥ ಲೋಹಕಾಂಚನಯೋರುಗ್ರ । ವಿಷಪೀಯೂಷಯೋರಪಿ ॥ ಕುಂಕುಮೇ ಪಿ ಚ ಪಿಷ್ಟೇ ಚ । ಶಾಖಾಶಾಲ್ಯಾನ್ನಯೋರಪಿ ॥ ಪಯಸ್ತೂಷ್ಣೀಕಯೋ ರ್ದಿವ್ಯ । ಮಂಚಲೋಷ್ಠಾವೃತಾವಸೌ॥ ಕಾರ್ಪಾಸೆ ಪಟ್ಟವಾಸೇ ಚ। ಗಾಜೌ ರತ್ನೇ ಚ ಮೌಕ್ತಿಕೆ ॥ ಕ್ಷೋಣೀಭೃಚ್ಚರಯೋರ್ಲಕ್ಷ್ಮೀ । ಮದಕಿಂಚನ ಯೋರಪಿ ॥ ಗಂಗಾಪಲ್ವಲಯೋಃ ಕ್ಷೇತ್ರೆ । ಸ್ಮಶಾನೇಽಪಿ ಚ ದೈವತೇ ॥ ಮಾನುಷೆ ಭಾಷಕೆ ಮಂತ್ರೇ । ಸತ್ಯೇಽಸತ್ಯೇ ಶುಭೇಽಶುಭೇ॥ವ್ಯಗದ್ವಿಣ್ಮೇ ಷಯೋಃ ಸರ್ವ । ಪೃಥುರೋಮ್ಣೋಶ್ಚ ಸರ್ವದಾ ॥ ಸರ್ವತ್ರೈಕಮತಿಂ ಕೃತ್ವಾ । ಸಮದೃಷ್ಟಿಂ ಸಮಕ್ಷಮಾಮ್ ॥ ಭಾವಿತವ್ಯಮಿದಂ ಮಹ್ಯಂ। ಭವಿ ತವ್ಯಮಿದಂ ನ ಮೆ ॥ ಅಕೃತತ್ವಸ್ಥಾಮಿತಿ ಸದಾ।ಧಾನ್ಯೇಷು ದ್ರವ್ಯರಾಶಿಷು॥ ಸದಾ ತೃಪ್ತಿಂ ಸಮಾಸಾದ್ಯ । ಸದಾನಂದೀ ಭವನ್ ಸ್ವಯಂ ॥ ಸ್ವಪಾದ ದರ್ಶನಾದೇವ । ಭಕ್ತಾನಾಂ ಚಾನ್ಯದೇಹಿನಾಂ । ಮೃಗಪಕ್ಷಿಪತಂಗಾನಾಂ । ಪಶ್ವಾದೀನಾಂ ಚ ಜೀವಿನಾಂ ॥ ದತ್ವಾ ಮೋಕ್ಷಂ ವಿಧೀಂದ್ರಾದೀನ್ ಸುರ ಸಂದೋಹದುರ್ಲಭಂ ॥ ಸ್ವಪಾದತೀರ್ಥತಸ್ತೋಯಂ । ತೀರ್ಥಂ ಕೃತ್ವಾ ಚರೇತ್ ಸದಾ॥ನಿರಂಜನಃ ಸನ್ ಯೋ ಲೋಕೆ ಸ ಏವ ಪರಜಂಗಮಃ॥ ಅಯಂ ಸಾಕ್ಷಾತ್ ಪರಂ ಬ್ರಹ್ಮ। ಹ್ಯಯಮೇವ ನಿರಂಜನಃ ॥ ಅಯಮೇವ ಮಹಾಯೋಗೀ । ಹ್ಯಯಮೇವ ಸದಾತ್ಮಕಃ ॥ ದೇಹಂ ಧೃತ್ವಾಪಿ ನಿರ್ದೇ ಹೀ । ಗುಣವಾನಪಿ ನಿರ್ಗುಣಃ ॥ ಏತಸ್ಯೋತ್ಕರ್ಷತಾಂ ವಕ್ತುಂ ! ಮಮಾ ಶಕ್ಯಂ ಮಹೇಶ್ವರೀ ॥" ಇದರರ್ಥವು—

ಬ್ರಹ್ಮ ವಿಷ್ಣುವೇಂದ್ರಾದಿ ದೇವತೆಗಳನ್ನೂ ಅಷ್ಟಮಹಾಭೋಗಗ ಳನ್ನೂ ಹಾಗು ಅಷ್ಟ ವಿಭೂತಿಗಳನ್ನೂ ಹುಲ್ಲಿನ ಸಮಾನವಾಗಿ ತಿಳಿದು, ಅಷ್ಟಸಿದ್ಧಿ ಎಲ್ಲ ಭೋಗ ನಾಲ್ಕು ಪ್ರಕಾರದ ಮುಕ್ತಿ ಮತ್ತು ತ್ರಿಲೋಕ ಗಳನ್ನು ಕಡ್ಡಿಯ ಸಮಾನವೆಂದು ತಿಳಿದು ಪ್ರಪಂಚದೊಳಗಿನ ಸ್ತ್ರೀ ಮೊದಲಾದ ಭೋಗಗಳನ್ನು ತೃಣೀಕರಿಸಿ ಸುವರ್ಣಾದಿ ಅಲಂಕಾರಗಳನ್ನು

ತುಚ್ಛವೆಂದೆಣಿಸಿ ಪ್ರತಿಯೊಂದು ವಸ್ತುವಿನ ವಿಷಯವಾಗಿ ನಿರಾಶೆಯುಳ್ಳ ವನಾಗಿ ಬೇರೆ ಯಾವ ಸಂಪತ್ತಿಯ ಕಡೆಗೆ ದುರ್ಲಕ್ಷ ಮಾಡಿ ಆಶೆಯು ಸ್ಪರ್ಶವಿಲ್ಲದ ಸ್ಥಾನಗಳಲ್ಲಿ ಸಂಚರಿಸಬೇಕು. ಶ್ರೀಗಂಧ ಮತ್ತು ಕೆಸರು, ಮಲ್ಲಿಗೆ ಹೂವು ಹಾಗು ಜಾಲಿಯ ಹೂವು, ಸುವರ್ಣ ಮತ್ತು ಕಬ್ಬಿಣ, ಅಮೃತ ಹಾಗು ವಿಷ, ಶಾಲ್ಯಾನ್ನ ಹಾಗು ಕದನ್ನ, ಹಾಲು ಮತ್ತು ನೀರು, ರೇಶಿಮೆ ಮತ್ತು ನೂಲಿನ ವಸ್ತ್ರ, ಮುತ್ತುರತ್ನಗಳು ಹಾಗು ಕಾಜಿನ ಸಾಮಾನುಗಳು, ರಾಜನು ಹಾಗು ಭಿಕ್ಷುಕನು, ಶ್ರೀಮಂತನು ಮತ್ತು ದರಿದ್ರನು, ಕ್ಷೇತ್ರ ಮತ್ತು ಸ್ಮಶಾನ, ಭಾಷಣ ಮತ್ತು ಮಂತ್ರ, ಸತ್ಯಾಸತ್ಯ ಹಾಗು ಶುಭಾಶುಭಗಳಲ್ಲಿ ನಿರಂತರವಾಗಿ ಸಮದೃಷ್ಟಿಯನ್ನಿಟ್ಟು ಸಮಸಹನಶೀಲತೆಯುಳ್ಳವನಾಗಿರಬೇಕು. ಇಂಥ ವಸ್ತು ಬೇಕು ಇಂಥ ಪದಾರ್ಥ ಬೇಡ ಎಂಬ ಭಾವನೆಯು ದ್ರವ್ಯದ ಮೇಲಾಗಲಿ ಅಥವಾ ಭೋಗ್ಯವಸ್ತುಗಳ ಮೇಲಾಗಲಿ ಇರಕೂಡದು ಸ್ವತಃ ಸದಾ ಸಂತುಷ್ಟನಾಗಿದ್ದು ಆನಂದ ವೃತ್ತಿಯಲ್ಲಿ ಇರತಕ್ಕದ್ದು. ತನ್ನ ಪಾದದರ್ಶನಮಾತ್ರದಿಂದ ಭಕ್ತರನ್ನೂ ಕ್ರಿಮಿಕೀಟಪತಂಗಾದಿಗಳನ್ನೂ ಬ್ರಹ್ಮಾದಿದೇವತೆಗಳನ್ನೂ ಉದ್ಧರಿಸಿ ಅವರಿಗೆ ದುರ್ಲಭವಾದ ಮುಕ್ತಿಯನ್ನು ಕೊಡತಕ್ಕದ್ದು. ಪಾದಸ್ಪರ್ಶದಿಂದ ನೀರನ್ನು ತೀರ್ಥವನ್ನಾಗಿ ಮಾಡುತ್ತ ಸಂಚಾರಮಾಡುವ ನಿರಂಜನ ಮೂರ್ತಿಯೇ ಪರಜಂಗಮನೆಂದು ಹೇಳತಕ್ಕದ್ದು. ಈತನು ಸಾಕ್ಷಾತ್ ಪರಬ್ರಹ್ಮನೆಂದು ತಿಳಿಯತಕ್ಕದ್ದು. ಈತನೇ ನಿರಂಜನ ಮೂರ್ತಿಯು ಮಹಾಯೋಗಿಯು ಮತ್ತು ಸತ್ಪುರುಷನೆಂದು ಹೇಳಬಹುದು. ಇವನು ದೇಹಧಾರಿಯಾಗಿದ್ದು ದೇಹರಹಿತನೆಂದೂ ಹಾಗು ಗುಣವಾನನಿದ್ದು ನಿರ್ಗುಣನೆಂದೂ ಹೇಳಬಹುದು ಎಂದು ವರ್ಣನೆಯಿದೆ (ವೀರಶೈವ ಸದಾಚಾರಸಂಗ್ರಹ ಪ್ರಕರಣ ೧೫, ಶ್ಲೋಕಗಳು ೫೧–೬೯ ). ಅಮೃತಬಿಂದು ಶೃತಿಯಲ್ಲಿ "ತದ್ ಬ್ರಹ್ಮಾಹಮಿತಿ ಜ್ಞಾತ್ವಾ । ಬ್ರಹ್ಮಸಂಪದ್ಯತೆ ಪರಂ ॥" ಎಂದು ಹೇಳಿದೆ. ಇದರಂತೆ ವಾತುಲೋತ್ತರ ವಚನದಲ್ಲಿ "ಸ್ವಯಂ ಸ್ವಯತ್ವಮಾಸಾದ್ಯ ! ಚರತೋ ನ ಪರಃ ಸ್ಮೃತಃ । ಅಸಾವತೀತವರ್ಣಾಶ್ರಮತ್ವೇನ ಪರಃ ಸ್ಮೃತಃ ॥" ಎಂದು ವರ್ಣನೆಯಿದೆ ಮತ್ತು ಸಿದ್ಧಾಂತ ಶಿಖಾಮಣಿಯ ೧೫ನೆಯ ಪರಿಚ್ಛೇದದ ೨೩೯–೨೪೦ ರ ವರೆಗಿನ ಪುಟಗಳೊಳಗಿನ ೬೬ರಿಂದ ೬೭ರ ವರೆಗಿನ ಶ್ಲೋಕಗಳಲ್ಲಿ "ಸ್ವಯಮೇವ ಸ್ವಯಂ ಭೂತ್ವಾ । ಚರತಃ ಸ್ವಸ್ವರೂಪತಃ ॥ ಪರೋನಾಸ್ತೀತಿ ಬೋಧಶ್ಯ । ಪರತ್ವಮಭಿಧೀಯತೆ ॥ ಸ್ವತಂತ್ರಃ ಸರ್ವಕೃತ್ಯೇಷು । ಸ್ವಯಂ ಪರತ್ವೇನ ಭಾವಿ

ತಃ ॥ ತೃಣೀಕುರ್ವನ್ ಜಗಜ್ಜಾಲಂ । ವರ್ತತೇ ಶಿವಯೋಗಿರಾಟ್ ॥ ವಿಶ್ವಾತೀತಂ ಪರಂ ಬ್ರಹ್ಮ । ಶಿವಾಖ್ಯಂಚಿತ್ಸ್ವರೂಪಕಂ ॥ ತದೇವಾಹ ಮಿತಿಜ್ಞಾಸೀ । ಸರ್ವೋತ್ಕೃಷ್ಟಃ ಸ ಉಚ್ಯತೆ ॥ " ಎಂದು ಹೇಳಿದೆ ಇದರ ವಿಶೇಷ ಸ್ಪಷ್ಟೀಕರಣವನ್ನು ಶ್ರೀಮನ್ನಿಜಗುಣಶಿವಯೋಗಿಗಳು ತಮ್ಮ ವಿವೇಕಚಿಂತಾಮಣಿಯ ೨ನೆಯ ಪ್ರಕರಣದ ೧೩೧ನೆಯ ಪುಟದಲ್ಲಿ ಮಾಡಿರುವರು. ಇಂಥ ತ್ರಿವಿಧರೂಪೀ ನಿರಂಜನಜಂಗಮ ಮೂರ್ತಿಗಳ ಆದಿ ಗುರುವಾದ ಶ್ರೀಮದನಾದಿ ಅಲ್ಲಮಪ್ರಭುದೇವರ ಐಕ್ಯಸ್ಥಾನವು ತೇರದಾಳದಲ್ಲಿಯ ಶ್ರೀಮನ್ನಿರಂಜನ ಜಗದ್ಗುರು ಅಲ್ಲಮಪ್ರಭುದೇವರ ಬೃಹನ್ಮಠವಲ್ಲಿರುವದೆಂದು ನಾವು ಹಿಂದಿನ ಪ್ರಕರಣದಲ್ಲಿ ಸಿದ್ಧಗೊಳಿಸಿದ್ದು ವಾಚಕರ ಲಕ್ಷದಲ್ಲಿರಬಹುದು. ಇದರ ಮೇಲಿಂದ ತೇರದಾಳದೊಳಗಿನ ಶ್ರೀಮದನಾದಿ ಅಲ್ಲಮಪ್ರಭುದೇವರ ಐಕ್ಯಸ್ಥಾನವೇ ಶೂನ್ಯಸಿಂಹಾಸನವಾಗಿದ್ದು ಮುಖ್ಯವಾದ ಜಗದ್ಗುರುಪೀಠವೆಂಬುವದರಲ್ಲಿ ತಿಲಮಾತ್ರ ಸಂಶಯ ವಿಲ್ಲವು ನಿಜವಾದ ವಸ್ತುಸ್ಥಿತಿಯು ಹೀಗಿರುತ್ತಿರಲು ಇತ್ತೀಚೆಗೆ ಊರೂರಿಗೆ ವಿರಕ್ತ ಜನರಲ್ಲಿ ಜಗದ್ಗುರುಗಳೂ ಹಾಗು ಜಗದ್ಗುರುಪೀಠಗಳೂ ಅನೇಕ ನಿರ್ಮಾಣವಾಗಿರುವವು. ಎಂದರೆ ವೀರಶೈವರಲ್ಲಿ ಜಗದ್ಗುರುಗಳ ಹಾಗು ಜಗದ್ಗುರುಪೀಠಗಳ ಸುಗ್ಗಿಯೇ ನಡೆದಿರುವುದು. ಬೇಕಾದವರು ಮನಬಲ್ಲಂತೆ ತಮ್ಮಷ್ಟಕ್ಕೆ ತಾವೇ ಜಗದ್ಗುರು ಎಂದು ಕರೆದುಕೊಳ್ಳುತ್ತಿರುವರು ಮತ್ತು ಇತಿಹಾಸದ ಕಡೆಗೆ ದುರ್ಲಕ್ಷ್ಯ ಮಾಡಿರುವರು. ಇವರಲ್ಲಿ ಚಿತ್ರಕಲ್ಲದುರ್ಗ, ಗದಗ, ಹುಬ್ಬಳ್ಳಿ, ಕಲ್ಯಾಣ ಹಾಗು ಹಾಗಲವಾಡಿ ಹೀಗೆ ಐದು ಸ್ಥಾನದವರು ಬಹಳೇ ಪ್ರಸಿದ್ಧರಾಗಿರುವರು. ಚಿತ್ರಕಲ್ಲದುರ್ಗದವರಿಗೆ ಮುರಗಿಯೆಂತಲೂ, ಗದುಗಿನವರಿಗೆ ಚಿಲ್ಲಾಳವೆಂತಲೂ, ಹುಬ್ಬಳ್ಳಿಯುವರಿಗೆ ಕುಮಾರವೆಂತಲೂ, ಕಲ್ಯಾಣದವರಿಗೆ ಕೆಂಪಿನವೆಂತಲೂ, ಹಾಗು ಹಾಗಲವಾಡಿಯವರಿಗೆ ಸಂಪಾದನೆಯೆಂದೂ ಹೀಗೆ ಐದು ಸಮಯಗಳಿಂದ ಕರೆಯುತ್ತಿರುವರು. ಮತ್ತು ಇವರಲ್ಲಿ ಕೆಲವರು ತಮ್ಮ ಜಗದ್ಗುರು ಪೀಠವು ಕಲ್ಯಾಣದಲ್ಲೆಂದೂ ಕಲವರು ಎಡೆಯೂರಿನಲ್ಲೆಂದೂ ಹಾಗು ಕೆಲವರು ಉಳವಿಯಲ್ಲೆಂದೂ ಭಾವಿಸುತ್ತಿರುವರು. ಇದಕ್ಕೆ ಸಮಯಭೇದವೆನ್ನುವರು. ಈ ಐದು ಸಂಗಡದವರಲ್ಲಿ ಅನ್ಯೋನ್ಯವಕ ನಮಸ್ಕಾರಾದಿ ವ್ಯವಹಾರಗಳು ಈಗ್ಯೂ ನಡೆಯುವದಿಲ್ಲ. ಪ್ರತಿಯೊಂದು ಸಮಯದವರು ಹಾಗು ಅವರ ಅನುಯಾಯಿಗಳು ಮಾತ್ರ ತಮ್ಮಷ್ಟಕ್ಕೆ ತಾವೇ ತಮ್ಮೊಳಗಿನ ಮುಖ್ಯಸ್ಥನಿಗೆ ಜಗದ್ಗುರು ಎಂದೆನ್ನುವರು. ಇವರಿಗೆ ಉಳಿದ ಸಮಯದವರು ಮತ್ತು

ಅವರ ಅನುಯಾಯಿಗಳು ಎಂದೆಂದಿಗೂ ಜಗದ್ಗುರುಗಳೆಂದು ಕರೆಯುವದಿಲ್ಲ. ವಿರಕ್ತರೊಳಗಿನ ಅಶಾಸ್ತ್ರೀಯವಾದ ಈ ಸಮಯಭೇದವು ಎಂದು ಮತ್ತು ಹೇಗೆ ಉತ್ಪನ್ನವಾಯಿತು ಹಾಗು ಪ್ರತಿಯೊಂದು ಸಮಯದವರು ಸದ್ಯಕ್ಕೆ ತಾವು ಮನ್ನಿಸುವಂಥ ಪೀಠಗಳು ಎಂದಿನಿಂದ ಉಪಸ್ಥಿತವಾದವು ಮುಂತಾದವುಗಳ ವಿಚಾರ ಮಾಡುವದು ಅತ್ಯಾವಶ್ಯಕವದೆ. ಆದುದರಿಂದ ನಾವು ಈ ಮಾತಿನ ಸತ್ಯಾಸತ್ಯತೆಯ ಸಲುವಾಗಿ ಸದ್ಯಕ್ಕೆ ಇಲ್ಲಿ ಕೇವಲ ಚಿತ್ರಕಲ್ಲದುರ್ಗದ, ಗದುಗಿನ ಹಾಗು ಹುಬ್ಬಳ್ಳಿಯ ಪೀಠಸ್ಥರ ಗುರುಪರಂಪರೆಯನ್ನು ಕೊಡುತ್ತೇವೆ. ಇವುಗಳೊಳಗಿನ ಚಿತ್ರಕಲ್ಲದುರ್ಗದ ಪಟ್ಟವಲ್ಲರಿಯ ಪ್ರಸ್ತಾವನೆ ಪುಟ ೬ ರಲ್ಲಿ ಹಾಗು ಪಟ್ಟವಲ್ಲರಿಯಲ್ಲಿ "ಶ್ರೀಪ್ರಭುದೇವನು ಕಲಿಗತ ವರ್ಷ ೩೯೬೫, ಶಾಲಿವಾಹನ ಶಕೆ ೭೮೬ರಲ್ಲಿ ಕಲ್ಯಾಣ (ನಿಜಾಮ ಇಲಾಖಾ) ನಗರದ ಸಾರ್ವಭೌಮರಾಜನಾದ ಬಿಜ್ಜಳನ ಮುಖ್ಯ ಪ್ರಧಾನನಾದ ಶ್ರೀ ಬಸವೇಶ್ವರನ ಭಕ್ತಿಪರೀಕ್ಷಾರ್ಥವಾಗಿ ಬರುತ್ತಿರಲು ಕೆಲವು ಶಿವಶರಣರಿಗೆ ಲಿಂಗಾಂಗಸಾಮರಸ್ಯದ ಜ್ಞಾನವನ್ನು ಮಾಡಿಕೊಟ್ಟು ಸೊನ್ನಲಾಪುರದ ಶ್ರೀ ಸಿದ್ಧರಾಮನಿಗೆ ಭೆಟ್ಟಿಯಾಗಿ ಆವನನ್ನು ಪರೀಕ್ಷಿಸಿ ಆತನಿಗೆ ತತ್ವೋಪದೇಶವನ್ನು ಮಾಡಿ ಆ ಸಿದ್ಧರಾಮನೊಡನೆ ಕಲ್ಯಾಣ ನಗರಕ್ಕೆ ಬಂದು ಮರುಳಶಂಕರದೇವನಿಗೆ ನಿಜಪದವಿಯನ್ನು ಕೊಟ್ಟು ಶ್ರೀ ಬಸವಾದಿ ಪ್ರಮಥಗಣಂಗಳಿಗೆ ಇಷ್ಟಪ್ರಾಣಭಾವಲಿಂಗಗಳ ಮಹತ್ವವನ್ನು ತಿಳಿಹೇಳಿ ಶೂನ್ಯಸಿಂಹಾಸನಾರೂಢನಾಗಿ ಶ್ರೀ ಬಸವೇಶ್ವರನ ಆದರಾತಿಥ್ಯವನ್ನು ಸ್ವೀಕರಿಸಿ ಕಲಿಗತವರ್ಷ ೪೦೦೧, ಶಾಲಿವಾಹನ ಶಕೆ ೮೨೨ ರೌದ್ರಿನಾಮಸಂವತ್ಸರದಲ್ಲಿ ಶ್ರೀ ಚನ್ನಬಸವೇಶ್ವರನಿಗೆ ಶೂನ್ಯಸಿಂಹಾಸನದ ಅಧಿಕಾರಗಳನ್ನು ಕೊಟ್ಟು ಎಲ್ಲ ಪ್ರಮಥಗಣಂಗಳಿಗೆ ದರ್ಶನಾಶೀರ್ವಾದವನ್ನಿತ್ತು ಮುಂದೆ ನಡೆಯುವಂಥವನಾದನು. ಶ್ರೀ ಚನ್ನಬಸವೇಶ್ವರನಿಂದ ಸದ್ಯದ ಶ್ರೀ ಜಯದೇವ ಮಹಾಸ್ವಾಮಿಗಳವರೆಗೆ ಚಿತ್ರಕಲ್ಲದುರ್ಗದ ಪೀಠದ ಮೇಲೆ ಒಟ್ಟು ೨೪ ಜನರಾದರು. ಮತ್ತು ಅವರ ಒಟ್ಟು ವರ್ಷಗಳು ೧೦೨೦ ಆದವು" ಎಂದು ಹೇಳಿದೆ. ಆ ಹೆಸರುಗಳು ಕೆಳಗಿನಂತೆ ಇರುವವು:—(೧) ಶ್ರೀ ಚನ್ನಬಸವೇಶ್ವರ ದೇವರು, ಇವರು ಉಳವಿಯಲ್ಲಿ ಅಂತರ್ಧಾನವಾದರು. (೨) ತೋಂಟದ ಸಿದ್ಧೇಶ್ವರ ದೇವರು, ಇವರು ಎಡೆಯೂರಲ್ಲಿ ಲಿಂಗೈಕ್ಯರಾದರು. ಇವರ ಸಮಾಧಿಯು ಎಡೆಯೂರಲ್ಲಿ ಇರುವದು (೩) ನಿರಕ್ಷರಬೋಳ ಬಸವೇಶ್ವರ, ಇವರು ವದ್ದಿಗಿರಿಯಲ್ಲಿ

ದೇಹವಿಟ್ಟರು. ಇವರ ಸಮಾಧಿಯು ಮದ್ದಿಗಿರಿಯಲ್ಲಿ ಇರುವದು. (೪) ಶ್ರೀ ಸಿದ್ಧವೀರಸ್ವಾಮಿಗಳು, ಇವರ ಸಮಾಧಿಯು ಗುಮ್ಮಳಾಪುರದಲ್ಲಿರುವದು. (೫) ಸಿದ್ಧದೇಶಿಕೇಂದ್ರಸ್ವಾಮಿ, ಇವರ ಸಮಾಧಿಯು ಗೂಳೂರಲ್ಲಿರುವದು. (೬) ಗಗನಸ್ವಾಮಿ, ಇವರ ಸಮಾಧಿಯು ಭೈರವದುರ್ಗದಲ್ಲಿರುವದು. (೭) ಕಟಿಗೆಹಳ್ಳಿಸ್ವಾಮಿ, ಇವರ ಸಮಾಧಿಯು ತಿಳುವಳ್ಳಿಯಲ್ಲಿ ಇರುವದು (೮) ಇಮ್ಮಡಿ ಮುರುಘರಾಜೇಂದ್ರಸ್ವಾಮಿ, ಇವರು ದಿಲ್ಲೀಶಹರಕ್ಕೆ ಹೋಗಿ ಶೂನ್ಯಸಿಂಹಾಸನದ ಸಲುವಾಗಿ ಶಿಖಾಶೈಲಗಳನ್ನು ತಂದು ಚಿತ್ರಕಲ್ಲದುರ್ಗದಲ್ಲಿ ಮಠವನ್ನು ಸ್ಥಾಪಿಸಿ ಅನೇಕ ಮಹತ್ವದ ಕೃತ್ಯಗಳನ್ನು ಮಾಡಿ ಅಲ್ಲಿಯೇ ದೇಹವಿಡುವಂಥವರಾದರು. ಇವರ ಸಮಾಧಿಯು ಚಿತ್ರಕಲ್ಲದುರ್ಗದ ಮಠದಲ್ಲಿ ಅದೆ (೯) ಇಮ್ಮಡಿ ಗುರುಸಿದ್ಧಸ್ವಾಮಿ, ಇವರ ಸಮಾಧಿಯು ಅನಂತಪುರದಲ್ಲಿ ಅದೆ. (೧೦) ಸ್ವಾದಿಯ ಚನ್ನಬಸವರಾಜೇಂದ್ರಸ್ವಾಮಿಗಳು, ಇವರ ಸಮಾಧಿಯು ಮಾಗಡಿಯಲ್ಲಿ ಇರುವದು. (೧ ) ಶಿರಹಟ್ಟಿಯ ಸಿದ್ಧಲಿಂಗಸ್ವಾಮಿಗಳು, ಇವರ ಸಮಾಧಿಯು ಚಂಗಡಿಯಲ್ಲಿರುವದು. (೧೨) ಗುರುಪಾದಸ್ವಾಮಿ, ಇವರ ಸಮಾಧಿಯು ಗುಣಸುಠಕಲ್ಲಿನಲ್ಲಿರುವದು. (೧೩) ಮೂರುಸಾವಿರ ಗುರುಪಾದ ಸ್ವಾಮಿಗಳು, ಇವರ ಸಮಾಧಿಯು ಚಿತ್ರಕಲ್ಲದುರ್ಗದಲ್ಲಿರುವದು. (೧೪) ಮೂರುಸಾವಿರ ಸಿದ್ಧಲಿಂಗಸ್ವಾಮಿ, ಇವರ ಸಮಾಧಿಯು ಮಾಗಡಿಯಲ್ಲಿರುವದು. (೧೫) ಒಪ್ಪತ್ತಿನ ಚನ್ನವೀರಸ್ವಾಮಿ, ಇವರ ಸಮಾಧಿಯು ತಿಳುವಳ್ಳಿಯಲ್ಲಿರುವದು. (೧೬) ವ್ಯಾಕರಣದ ಸಿದ್ಧಲಿಂಗಸ್ವಾಮಿ, ಇವರ ಸಮಾಧಿಯು ಮಾಗಡಿಯಲ್ಲಿರುವದು. (೧೭) ನೈಘಟದ ಸಿದ್ಧಬಸವಸ್ವಾಮಿ, ಇವರ ಸಮಾಧಿಯು ಹಾವೇರಿಯಲ್ಲಿರುವದು. (೧೮) ಸಣ್ಣಬರಹದ ರಾಜಕೋಟಿಸ್ವಾಮಿ, ಇವರ ಸಮಾಧಿಯು ಚಿತ್ರಕಲ್ಲದುರ್ಗದ ಮಠದಲ್ಲಿರುವದು. (೧೯) ಸಾವಳಿಗೆಯ ಗುರುಶಾಂತಸ್ವಾಮಿ, ಇವರ ಸಮಾಧಿಯು ಚಿನ್ಮೂಲಾದ್ರಿಯಲ್ಲಿರುವದ. (೨೦) ಸಣ್ಣಪಾದ ಚನ್ನವೀರಸ್ವಾಮಿ, ಇವರ ಸಮಾಧಿಯು ಚಿತ್ರಕಲ್ಲದುರ್ಗದ ಮಠದಲ್ಲಿರುವದು. (೨೧) ಕಲಿಗತ ವರ್ಷ ೯೯೬೩, ಶಾಲಿವಾಹನ ಶಕೆ ೧೭೮೪ ದುಂದುಭಿನಾಮ ಸಂವತ್ಸರ ಫಾಲ್ಗುಣ ಶುದ್ಧ ಪಂಚಮಿ ಭಾನುವಾರದಲ್ಲಿ ಮಹಾಲಿಂಗಸ್ವಾಮಿಗಳಿಗೆ ಶಿಖಾಪಟ್ಟವಾಯಿತು. ಇವರ ಸಮಾಧಿಯು ಶಿರಸಂಗಿಯಲ್ಲಿರುವದು. (೨೨) ರುದ್ರಸ್ವಾಮಿ, ಇವರ ಸಮಾಧಿಯು ಚಿತ್ರಕಲ್ಲದುರ್ಗದಲ್ಲಿರುವದು. (೨೩) ಮುಪ್ಪಿನಸ್ವಾಮಿ, ಇವರ

ಸಮಾಧಿಯು ಬ್ಯಾಡಗಿಯಲ್ಲಿರುವದು. (೨೪) ಜಯದೇವ ಮಹಾಸ್ವಾಮಿಗಳು ಸದ್ಯಕ್ಕೆ ಜೀವಂತವಿರುವರು. ಪ್ರತಿಯೊಬ್ಬ ಸ್ವಾಮಿಯ ಜೀವನ ಚರಿತೆಯನ್ನು ಎಷ್ಟು ಸಂಕ್ಷಿಪ್ತವಾಗಿ ಕೊಟ್ಟರೂ ಬೆಳೆಯುಬಹುದೆಂಬ ಹೆದರಿಕೆಯಿಂದ ಪ್ರತಿಯೊಬ್ಬರ ಹೆಸರು, ಮೂಲಸ್ಥಾನ ಹಾಗು ಸಮಾಧಿಯ ಸ್ಥಳವನ್ನು ಮೇಲೆ ಕಾಣಿಸಿದೆ. ಸವಿಸ್ತಾರವಾದ ಸಂಗತಿಯು ಬೇಕಾದಲ್ಲಿ ವಾಚಕರು ಚಿತ್ರಕಲ್ಲದುರ್ಗದ ಪಟ್ಟವಲ್ಲರಿಯನ್ನು ಓದಬೇಕು.

ಗದುಗಿನ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳ ನಿರಂಜನ ಜಂಗಮವಂಶದರ್ಪಣದಲ್ಲಿ "(೧) ತೋಂಟದ ಸಿದ್ಧಲಿಂಗಾರ್ಯ ( ಕಲಿಕಾಲದ ದ್ವಿತಿಯಪ್ರಭು ), (೨) ಬೋಳಬಸವಾರ್ಯ, (೩) ಗೂಳೂರು ಸಿದ್ಧವೀರಸ್ವಾಮಿ, (೪) ಉದ್ದಾನಾರ್ಯ ಸ್ವಾಮಿ, (೫) ಹರಿಹರಸ್ವಾಮಿ, (೬) ಭಿಕ್ಷುಕದ ಬಸವಲಿಂಗಾರ್ಯ,(೭) ರಾಚೋಟಿಸ್ವಾಮಿ, ಇವರ ಸಮಾಧಿಯು ತಿಳುವಳ್ಳಿಯಲ್ಲಿ ಅದೆ. (೮) ಕಾದಿ ಮಹಾಂತಸ್ವಾಮಿ, ಇವರ ಸಮಾಧಿಯು ಹೂವಿನಹಡಗಲಿ ತಾಲೂಕಿನ ಬಾಚನಹಳ್ಳಿಯಲ್ಲಿ ಹಗರೀಹಳ್ಳದ ದಂಡೆಯ ಮೇಲೆ ಅದೆ. (೯) ಅರ್ಧನಾರೀಶ್ವರಸ್ವಾಮಿ, ಇವರ ಸಮಾಧಿಯು ಡಂಬಳದಲ್ಲಿರುವದು. (೧೦) ನಂದೀಶ್ವರಸ್ವಾಮಿ, ಇವರ ಸಮಾಧಿಯು ಅಣ್ಣಿಗೇರಿಯಲ್ಲಿ ಅದೆ. (೧೧) ಉಗ್ಗದ ಸಿದ್ಧಲಿಂಗಾರ್ಯ, ಇವರ ಸಮಾಧಿಯು ಅಣ್ಣಿಗೇರಿಯಲ್ಲಿ ಅದೆ. (೧೨) ಸದಾಶಿವಸ್ವಾಮಿ, ಇವರ ಸಮಾಧಿಯು ಕೊಪ್ಪಳ ( ನಿಜಾಮ ಇಲಾಖಾ ) ದಲ್ಲಿ ಅದೆ. (೧೩) ಮಹಾಂತಸ್ವಾಮಿ, ಇವರ ಸಮಾಧಿಯು ಹೂವಿನಹಡಗಲಿ ತಾಲೂಕಿನ ಹಂಪಸಾಗರದಲ್ಲಿರುವದು. (೧೪) ತೋಂಟದಾರ್ಯ, ಇವರ ಸಮಾಧಿಯು ಗದುಗಿನಲ್ಲಿರುವದು. (೧೫) ಮೃತ್ಯುಂಜಯಸ್ವಾಮಿ, ಇವರ ಸಮಾಧಿಯು ಗದುಗಿನಲ್ಲಿರುವದು. (೧೬) ಸಿದ್ಧೇಶ್ವರಸ್ವಾಮಿ, ಇವರ ಸಮಾಧಿಯು ಗದುಗಿನಲ್ಲಿರುವದು (೧೭) ಇಟಗಿ ಅನ್ನದಾನಸ್ವಾಮಿ. ಸದ್ಯಕ್ಕೆ ಜೀವಂತ ಇರುವರು" ಎಂದು ಹೇಳಿದೆ. ಈ ಪೀಠದವರು ಒಟ್ಟು ೧೭ ಜನರಾದರು. ಈ ಪೀಠದ ಮೂಲ ಪುರುಷನಿಗೆ ಕಲಿಕಾಲದ ದ್ವಿತೀಯ ಪ್ರಭುವಿನ ಅವತಾರವೆಂದು ಹೇಳಿಕೊಂಡಿರುವರು. ವಿಸ್ತಾರವಾದ ಸಂಗತಿಯು ಬೇಕಾದರೆ ವಾಚಕರು ಗದುಗಿನ ತೋಂಟದ ನಿರಂಜನಜಂಗಮವಂಶದರ್ಪಣವನ್ನು ಓದಬೇಕು.

ಇವುಗಳಂತೆ ಹುಬ್ಬಳ್ಳಿಯ ಪೀಠದ ಸ್ವಾಮಿಗಳ ವಂಶಾವಳಿಯು ( ಗುರುಪರಂಪರೆಯು ) ಅಚ್ಚಾಗಿಲ್ಲ ಆದರೆ ಹುಬ್ಬಳ್ಳಿಯ ಶ್ರೀ ಮೂರು

ಸಾವಿರಮಠದ ಶ್ರೀ ಗುರುಸಿದ್ಧಸ್ವಾಮಿಗಳು ೧೨೪೬ ಫಸಲಿ, ತಾ. ೪ ನವ್ಹೆಂಬರ ಸನ್ ೧೮೩೬ ಇಸವಿ, ಶಾಲಿವಾಹನ ಶಕೆ ೧೭೫೮ ದುರ್ಮುಖಿ ನಾಮ ಸಂವತ್ಸರ, ಆಶ್ವಿನ ಕೃಷ್ಣ ೧೦, ಭಾರ್ಗವಾರ ಮಘಾ ನಕ್ಷತ್ರ ದ್ವಿತೀಯ ಪ್ರಹರ, ಅಮೃತಸಿದ್ಧಿಯೋಗದಲ್ಲಿ ಶ್ರೀಚನ್ನಬಸವ ಪುರಾಣ ವನ್ನು ಬರೆಯಿಸಿ ಸಮಾಪ್ತಗೊಳಿಸಿದಂತೆ ಮಠದೊಳಗಿನ ಪುರಾಣದ ಪ್ರತಿಯ ಕಡೆಯ ಭಾಗದಲ್ಲಿ ಬರೆಯಿಸಿ ಅದರ ಮುಂದೆ ಆ ಮಠದ ವಂಶಾ ವಳಿಯನ್ನು ಬರೆಯಿಸಿರುವರು. ಅದು ಹೀಗಿರುವದು:- (೧) ಶ್ರೀ ಕುಮಾರ ಸಮಯಭೇದದ ಕರ್ತೃ ಶ್ರೀ ಭೂಪುರ ತ್ರಿಸಹಸ್ರಮಠಾಧಿಕಾರಿ ಶ್ರೀ ಹುಚ್ಚಗುರುಸಿದ್ಧಸ್ವಾಮಿ, (೨) ಇವರ ಕರಕಂಜೋದ್ಭವರಾದ ಸಿದ್ಧಲಿಂಗ ಸ್ವಾಮಿ. (೩) ಇವರ ಪಾಣಿವಾರಿಜೋದ್ಭವರಾದ ಶಾಂತವೀ ಸ್ವಾಮಿ. (೪) ಇವರ ಕರಕಮಲಸಂಜಾತರಾದ ಗಂಗಾಧರಸ್ವಾಮಿ, (೫) ಇವರ ಹಸ್ತ ಪದ್ಮಭವರಾದ ಗುರುಸಿದ್ಧಸ್ವಾಮಿ. ಈ ಐದನೇ ಗುರುಸಿದ್ಧಸ್ವಾಮಿಗಳೇ ಮೇಲೆ ಹೇಳಿದಂತೆ ಶಕ ೧೭೫೮ರಲ್ಲಿ ಶ್ರೀ ಚನ್ನಬಸವ ಪುರಾಣವನ್ನು ಬರೆಸಿರುವರು.

ಕ್ರಿ. ಶ. ೧೮೩೬ರ ಕ್ಕಿಂತಲೂ ಹಿಂದೆ ಈ ಪೀಠದವರು ಒಟ್ಟು ೪ ಜನರು ಆದಂತೆ ಕಂಡು ಬರುತ್ತದೆ. ಇದರ ಮೇಲಿಂದ ಈ ಹುಬ್ಬಳ್ಳಿ ಪೀಠವು ಇತ್ತೀಚೆಗೆ ಸ್ಥಾಪಿಸಲ್ಪಟ್ಟಂತೆ ಕಂಡು ಬರುತ್ತದೆ.

ಕ್ರಿ. ಶ. ೧೭೦೦ರ ಸುಮಾರಕ್ಕೆ ಮುರಗೀ ಸಮಯದ ಸೋಮಶೇ ಖರ ಶಿವಯೋಗಿ ಎಂಬ ಒಬ್ಬ ವಿರಕ್ತ ಮೂರ್ತಿಯು ಬಸವೇಶ್ವರ ವಚನ, ತೋಂಟದ ಸಿದ್ಧೇಶ್ವರ ವಚನ ಮುಂತಾದವುಗಳ ಮೇಲೆ ಟೀಕೆಯನ್ನು ಬರೆದಿರುವನು ಈತನು ತನ್ನ ತೋಂಟದ ಸಿದ್ಧೇಶ್ವರ ವಚನದ ಪ್ರಾರಂ ಭದಲ್ಲಿ ತನ್ನ ಗುರುಪರಂಪರೆಯನ್ನು ಕೆಳಗಿನಂತೆ ಕೊಟ್ಟಿರುವನು. ಅದು ಹೇಗೆಂದರೆ :- (೧) ಬೋಳಬಸವೇಶ್ವರ (೨) ಗೂಳೂರ ಸಿದ್ಧಲಿಂಗಯ್ಯ (೩) ಗುಮ್ಮಳಾಪುರದ ಸಿದ್ಧವೀರೇಶ (೪) ಗಗನದಯ್ಯ (೫) ಕಟ್ಟಿಗೆಹಳ್ಳಿ ಸಿದ್ಧಲಿಂಗೇಶ್ವರ (೬) ಮುರಿಗೆಯ ಶಾಂತವೀರೇಶ್ವರ (೭) ಮುರಿಗೆಯ ಗುರುಸಿದ್ಧೇಶ್ವರ (೮) ಕವಿಸೋಮಶೇಖರ ಶಿವಯೋಗಿ.

ಕರ್ನಾಟಕಕವಿಚರಿತೆಯ ೨ನೆಯ ಸಂಪುಟದ ಮೇಲಿಂದ ಹೊರಡುವ

ಕ್ರಿ. ಶ. ೧೪೭೦-೧೭೩೦ರ ವರೆಗಿನ ಶ್ರೀಮನ್ನಿರಂಜನ ವಿರಕ್ತ ಜಂಗಮರ ಗುರುಪರಂಪರೆಯು ಕೆಳಗಿನಂತೆ ಇರುವದು :—



ಸುಮಾರು ಕ್ರಿ. ಶ ೧೬೦೦ರಲ್ಲಿ ಮುರಿಗೆಯ ಸೋಮಶೇಖರ ಶಿವಯೋಗಿಯು ಕೊಟ್ಟ ಗುರುಪರಂಪರೆಯ ಅನುವಾದವನ್ನೇ ಚಿತ್ರಕಲ್ಲ ದುರ್ಗದ ಪಟ್ಟವಲ್ಲರಿಕಾರರು ಮಾಡಿದಂತೆ ಸಹಜವಾಗಿ ವಾಚಕರ ಲಕ್ಷ್ಯದಲ್ಲಿ ಬರಬಹುದು. ಆದರೆ ಇದರಲ್ಲಿಯ ಆನೆಯವನಾದ ಸೋಮಶೇಖರ ಶಿವಯೋಗಿಯನ್ನು ಯಾವದೋ ಒಂದು ನಿಮಿತ್ತವಾಗಿ ಬಿಟ್ಟುಕೊಟ್ಟು ಮುಂದೆ ಸ್ವಾದಿಯ ಚನ್ನಬಸವರಾಜೇಂದ್ರಸ್ವಾಮಿ ಮುಂತಾದವರನ್ನು ಪಟ್ಟವಲ್ಲರಿಕಾರರು ಕೊಟ್ಟಂತೆ ಕಾಣಬಹುದು. ಆದರೆ ಅದೇ ತೋಂಟದ ಸಿದ್ಧಲಿಂಗೇಶ್ವರನ ವಚನದೊಳಗಿನ ಗುರುಪರಂಪರೆಯನ್ನು ಬಿಟ್ಟು ಈ ಚಿತ್ರಕಲ್ಲದುರ್ಗದ ಪಟ್ಟವಲ್ಲರಿಕಾರರು ಶ್ರೀ ತೋಂಟದಾರ್ಯನ ಗುರುವು ಉಳುವಿಯಲ್ಲಿ ಅಂತರ್ಧಾನ ಹೊಂದಿದ ಶ್ರೀ ಚನ್ನಬಸವೇಶ್ವರನೆಂದು ಬರೆದು ಗುರುಪರಂಪರೆಯನ್ನು ಕೊಟ್ಟಿರುವರು. ಈ ಮೇಲಿನ ವರ್ಣನೆಯ ಮೇಲಿಂದ ಚಿತ್ರಕಲ್ಲದುರ್ಗದ ಪಟ್ಟವಲ್ಲರಿಕಾರರು ಕೊಟ್ಟ ಗುರುಪರಂಪರೆಯು ಅಷ್ಟು ಸಮಂಜಸವಾಗಿ ತೋರಲಾರದು. ಇದರಂತೆ ಗದುಗಿನ ನಿರಂಜನಜಂಗಮವಂಶದರ್ಪಣಕಾರರು ಎಡೆಯೂರ ತೋಂಟದಾರ್ಯನಿಂದ ಗೂಳೂರ ಸಿದ್ಧವೀರಸ್ವಾಮಿಯವರೆಗೆ ಮೇಲಿನ ಮುರಿಗೆಯ ಸೋಮಶೇಖರ ಶಿವಯೋಗಿಯ ಗುರುಪರಂಪರೆಯ ಅನುವಾದವನ್ನು ಮಾಡಿ ಮುಂದೆ ಉದ್ದಾನಾರ್ಯ, ಹರಿಹರ, ರಾಚೋಟಿಸ್ವಾಮಿ, ಬಸವಲಿಂಗಾರ್ಯ ಮುಂತಾದವರ ಹೆಸರುಗಳನ್ನು ಹೇಳುತ್ತ ಹೋಗಿರುವರು ಮತ್ತು ಚಿತ್ರಕಲ್ಲದುರ್ಗದ ಪಟ್ಟವಲ್ಲರಿಕಾರರಂತೆ ಇವರಾದರೂ ಸ್ವತಃ ತೋಂಟದಾರ್ಯನು ತನ್ನ ವಚನದಲ್ಲಿ ಕೊಟ್ಟಂಥ ನಿಜವಾದ ಗುರುಪರಂಪರೆಯನ್ನು ಬಿಟ್ಟು ಈ ಎಡೆಯೂರಲ್ಲಿ ಬಯಲಾದ ತೋಂಟದಾರ್ಯನನ್ನೇ ತಮ್ಮ ಗುರುಪರಂಪರೆಯಲ್ಲಿ ಮೊದಲನೆಯವನೆಂದು ಹಿಡಿದಿರುವರು. ಆದರೆ ಪಟ್ಟವಲ್ಲರಿಕಾರರು ಶ್ರೀ ಚನ್ನಬಸವೇಶ್ವರನನ್ನು ಮೊದಲನೆಯವನೆಂದು ಹಿಡಿದಿರುವರು. ಇವರ ಮೇಲಿಂದ ಗದುಗಿನ ಮಠದ ಗುರುಪರಂಪರೆಯಾದರೂ ಅಷ್ಟು ಸಮಂಜಸವಾಗಿ ತೋರಲಾರದು.

ಸುಮಾರು ಕ್ರಿ ಶ. ೧೪೭೦ರಲ್ಲಿ ಶ್ರೀ ತೋಂಟದಾರ್ಯನು ತನ್ನ ಸಿದ್ಧೇಶ್ವರ ವಚನದಲ್ಲಿ "(೧) ಅನಾದಿಗಣೇಶ (೨) ಆದಿಗಣೇಶ (೩) ನಿರ್ಮಾಯ (೪) ನಿರಂಜನ (೫) ಜ್ಞಾನಾನಂದ (೬) ಆತ್ಮಗಣೇಶ (೭) ಅಧ್ಯಾತ್ಮಗಣೇಶ (೮) ರುದ್ರಗಣೇಶ (೯) ಬಸವಪ್ರಭು (೧೦) ಆದಿಲಿಂ

ಗೇಶ (೧೧) ಚನ್ನವೀರೇಶ (೧೨) ಗೋಸಲದೇವ (೧೩) ಶಂಕರದೇವ (೧೪) ದಿವ್ಯಲಿಂಗೇಶ (೧೫) ಗೋಸಲ ಚನ್ನಬಸವೇಶ (೧೬) ತೋಂಟದ ಸಿದ್ಧಲಿಂಗೇಶ" ಎಂದು ಸ್ವತಃ ತಮ್ಮ ಗುರುಪರಂಪರೆಯನ್ನು ಕೊಟ್ಟಿರುವನು. ಈ ಗುರುಪರಂಪರೆಗೂ ಹಾಗು ಗುರುಸಿದ್ಧೇಶ್ವರಕೃತ ನಿಜಾಚರಣೆಯ ೧೧ನೆಯ ಸ್ಥಲದೊಳಗಿನ ಗುರುಪರಂಪರೆಗೂ ಅಕ್ಷರಶಃ ಹೋಲಿಕೆಯುಂಟು. ಇದರ ಮೇಲಿಂದ ತೋಂಟದ ಸಿದ್ಧಲಿಂಗೇಶನವರೆಗೆ ಈ ಎರಡೂ ವಂಶಾವಳಿಗಳು ನಿಜವೆಂದು ತಿಳಿಯಲಿಕ್ಕೆ ಏನೂ ಅಭ್ಯಂತರವಿಲ್ಲೆಂದು ತೋರುತ್ತದೆ. ಇವುಗಳಲ್ಲಿ ತೋಂಟದ ಸಿದ್ಧೇಶ್ವರ ವಚನದೊಳಗಿನ ಗರುಪರಂಪರೆಯು ಎಲ್ಲಕ್ಕೂ ಪುರಾತನದ್ದಿರುತ್ತದೆ.

ಚಿತ್ರಕಲ್ಲದುರ್ಗದ ಪಟ್ಟವಲ್ಲರಿಕಾರರಂತೆ ದುರ್ಗದ ಗುರುಪರಂಪರೆಯಲ್ಲಿ ಉಳುವಿಯಲ್ಲಿ ಐಕ್ಯನಾದ ಶ್ರೀ ಚನ್ನಬಸವೇಶ್ವರನನ್ನು ಮೊದಲನೆಯವನೆಂದೂ ಮತ್ತು ತೋಂಟದ ಸಿದ್ಧೇಶ್ವರನನ್ನು ಎರಡನೆಯವನೆಂದೂ ಹಿಡಿಯುವದರಲ್ಲಿ ಏನೂ ತಥ್ಯಾಂಶವಿಲ್ಲೆಂದು ವಿಚಾರಾಂತ್ಯದಲ್ಲಿ ವಾಚಕರು ಸಹಜವಾಗಿ ಮನಗಾಣಬಹುದು. ಅದು ಹೇಗೆಂದರೆ:—ಕವಿಚರಿತೆಕಾರರು ಕವಿಚರಿತೆಯಲ್ಲಿ ಶ್ರೀ ಚನ್ನಬಸವೇಶ್ವರನ ಕಾಲವು ಸುಮಾರು ಕ್ರಿ. ಶ. ೧೧೬೦ ಎಂದೂ ಮತ್ತು ತೋಂಟದ ಸಿದ್ಧೇಶ್ವರನ ಕಾಲವು ಸುಮಾರು ಕ್ರಿ. ಶ ೧೬೭೦ ಎಂದೂ ಸಿದ್ಧಗೊಳಿಸಿರುವರು. ಈ ಕವಿಚರಿತೆಕಾರರು ಶ್ರೀ ಚನ್ನಬಸವೇಶನಿಗೆ ಯಾರಿಂದ ಉಪದೇಶವು ದೊರಕಿತೆಂಬುದನ್ನು ಹೇಳದೆ ಹರದನಹಳ್ಳಿ ಗೋಸಲ ಚನ್ನಬಸವೇಶ್ವರನು ಮಾತ್ರ ತೋಂಟದ ಸಿದ್ಧೇಶ್ವರನಿಗೆ ಉಪದೇಶ ಮಾಡಿದಂತೆ ಹೇಳಿರುವರು. ಇದನ್ನು ಬಿಟ್ಟು ಚಿತ್ರಕಲ್ಲದುರ್ಗದ ಪಟ್ಟವಲ್ಲರಿಕಾರರು ತೋಂಟದ ಸಿದ್ಧಲಿಂಗೇಶನಿಗೆ ಉಳವಿಯಲ್ಲಿ ಅಂತರ್ಧನನಾದಂಥ ಚನ್ನಬಸವೇಶ್ವರನ ಕಡೆಯಿಂದ ಉಪದೇಶ ದೊರಕಿದಂತೆ ಪಟ್ಟವಲ್ಲರಿಯಲ್ಲಿ ನಮೂದಿಸಿರುವರು ಇದು ಸಯುಕ್ತಿಕವೆಂದು ತೋರಲಾರದು. ಏಕೆಂದರೆ ಹರದನಹಳ್ಳಿ ಗೋಸಲ ಚನ್ನಬಸವೇಶ್ವರನು ತೋಂಟದಾರ್ಯನ ಉಪದೇಶಗುರುವಿದ್ದನೆಂದು ಕವಿಚರಿತೆಕಾರರು ಹೇಳಿದಂತೆ ಸ್ವತಃ ತೋಂಟದಾರ್ಯನೇ ತನ್ನ ಸಿದ್ಧೇಶ್ವರವಚನದಲ್ಲಿ ಹೇಳಿರುವನು. ಮತ್ತು ನಿಜಾಚಾರಣೆ ಎಂಬ ಗ್ರಂಥದೊಳಗಿನ ವಂಶಾವಳಿಯ ಮೇಲಿಂದಲೂ ಇವರ ಸತ್ಯತೆಯು ಕಂಡು ಬರುತ್ತದೆ ಶ್ರೀ ತೋಂಟದಾರ್ಯನು ಕೊಟ್ಟ ಗುರುಪರಂಪರೆಯನ್ನು ನಾವು ಹಿಂದೆ

ಕೊಟ್ಟಿರುವೆವು. ಮತ್ತು ಕ್ರಿ. ಶ. ೧೯೩೨ ಅಕ್ಟೋಬರ ತಿಂಗಳದ 'ಶಿವಾನುಭವ' ಮಾಸಪತ್ರಿಕೆಯಲ್ಲಿ ನಿರಂಜನ ವಂಶರತ್ನಾಕರವೆಂಬ ಗ್ರಂಥದ ಕೆಲವು ಭಾಗವು ಅಚ್ಚಾಗಿದೆ. ಅದರಲ್ಲಿಯೂ ಕೂಡ ಇದೇ ಗುರುಪರಂಪರೆಯು ಇದ್ದದ್ದು ನಾವು ಹಿಂದೆ ಕೊಟ್ಟ ಮ। ರಾ। ಹುಂಡೇಕಾರ ವಕೀಲರ ಲೇಖದ ಸಾರಾಂಶದ ಮೇಲಿಂದ ವಾಚಕರು ಮನಗಾಣಬಹುದು. ಅದರ 'ಶಿವಾನುಭವ'ದಲ್ಲಿ ಇತ್ತೀಚೆಗೆ ಪ್ರಸಿದ್ಧವಾದ ನಿರಂಜನ ವಂಶರತ್ನಾಕರದಲ್ಲಿ "(೧) ಅಲ್ಲಮಪ್ರಭು (೨) ಚನ್ನಬಸವೇಶ್ವರ (೩) ಸಿದ್ದರಾಮ" ಮುಂತಾದವರ ಹೆಸರುಗಳನ್ನು ಕೊಟ್ಟು ಅವುಗಳ ಮುಂದೆ ಸಿದ್ಧೇಶ್ವರ ವಚನದೊಳಗಿನ ವಂಶಾವಳಿಯನ್ನು ಕೊಟ್ಟಿದ್ದು ಕಂಡು ಬರುತ್ತದೆ. ಈ ಗುರುಪರಂಪರೆಯು ವಿರೂಪಾಕ್ಷಪಂಡಿತ (ಸು. ೧೫೮೪) ನ ಚನ್ನಬಸವ ಪುರಾಣದೊಳಗಿನ ವಂಶಾವಳಿಯ ಅನುವಾದವೇ. ಆದ್ದರಿಂದ ಇದು ಇತ್ತೀಚಿನದೆಂಬದು ಸಹಜವಾಗಿ ಕಂಡು ಬರುವದು. ಯಾಕಂದರೆ ಈ ನಿರಂಜನ ವಂಶರತ್ನಾಕರ ಗ್ರಂಥದ ೪ನೆಯ ಪುಟದಲ್ಲಿ ಕ್ರಿ. ಶ. ೧೬೫೫ರ ಸುಮಾರಿನಲ್ಲಿ ಇದ್ದ ಷಡಕ್ಷರದೇವ ಕವಿಯ ಹೆಸರನ್ನೂ, ಪುಟ ೬೦ರಲ್ಲಿ ೧೮ನೆಯ ಶತಮಾನದ ಪ್ರಾರಂಭದಲ್ಲಿ ಸ್ಥಾಪಿಸಲ್ಪಟ್ಟ ಒಂಟಿನೂರಿ ಎಂಬ ಊರಿನ ಹೆಸರನ್ನೂ, ಹಾಗು ಎರಕ್ಕರೊಳಗೆ ಸುಮಾರು ೧೯ನೆಯ ಶತಮಾನದ ಪ್ರಾರಂಭದಲ್ಲಿ ಅಶಾಸ್ತ್ರೀಯವಾಗಿ ಉಂಟಾದ ಸಮಯ ಭೇದಗಳೊಳಗಿನ ಮುರಿಗಿ, ಕೆಂಪಿನ, ಸಂಪಾದನೆ ಮುಂತಾದ ಹೆಸರುಗಳನ್ನೂ ಕೊಟ್ಟಿರುವದರಿಂದ ಈ ಗ್ರಂಥಕರ್ತನು ಬಹಳ ಅರ್ವಾಚೀನನು ಅಂದರೆ ಸುಮಾರು ೧೦೦ ವರ್ಷಗಳ ಪೂರ್ವದವನೆಂದು ತೋರುತ್ತದೆ.

ಶ್ರೀ ತೋಂಟದ ಸಿದ್ಧಲಿಂಗಯತಿಯ ವಚನದೊಳಗಿನ ವಂಶಾವಳಿಯ ಮೇಲಿಂದ ಶ್ರೀ ಬಸವಪ್ರಭುದೇವನಿಂದ ತೋಂಟದ ಸಿದ್ಧೇಶ್ವರನ ವರೆಗೆ ೮ ಜನರು ಆಗಿಹೋಗಿರುವರು. ಹೀಗಿರುತ್ತಿರಲು ಈ ಎಲ್ಲರನ್ನು ಬಿಟ್ಟು ಕೇವಲ ಶ್ರೀ ಚನ್ನಬಸವೇಶ್ವರನ ತರುವಾಯ ತೋಂಟದ ಸಿದ್ಧೇಶ್ವರನೆಂದು ಬರೆಯುವದರಲ್ಲಿ ಚಿತ್ರಕಲ್ಲದುರ್ಗದ ಪಟ್ಟವಲ್ಲರಿಕಾರರ ಉದ್ದೇಶವು ಗೊತ್ತಾಗಲೊಲ್ಲದು. ಇದೇ ವಿಷಯವಾಗಿ ಗದುಗಿನ ನಿರಂಜನ ಜಂಗಮವಂಶದರ್ಪಣಕಾರರು ಇದಕ್ಕಿಂತಲೂ ಹೆಚ್ಚಿನ ತಪ್ಪು ಮಾಡಿರುವರೆಂದು ಕಂಡು ಬರುತ್ತದೆ. ಅದು ಹೇಗಂದರೆ:-ಅವರು ತಮ್ಮ ಮೂಲಪುರುಷನು ತೋಂಟದಾರ್ಯನೆಂದು ಹಿಡಿದು ಆತನಿಗೆ ಕಲಿಕಾಲದ ದ್ವಿತೀಯ

ಪ್ರಭುವೆಂದು ಹೇಳಿ ಮುಂದೆ ತಮ್ಮ ಗುರುಪರಂಪರೆಯನ್ನು ಕೊಟ್ಟಿರುವರು. ಇದರ ಮೇಲಿಂದ ಈ ತೋಂಟದಾರ್ಯನಕ್ಕಿಂತಲೂ ಪೂರ್ವದಲ್ಲಿ ವಿರಕ್ತಾಶ್ರಮದೊಳಗೆ ಗುರುಪರಂಪರೆಯೇ ಇದ್ದಿಲ್ಲವೆಂಬಂತೆ ಭಾಸವಾಗುತ್ತದೆ ಇದಂತೂ ದೊಡ್ಡ ತಪ್ಪು. ಈ ತೋಂಟದಾರ್ಯನಿಂದ ಮುಂದೆ ಕಟ್ಟಿಗೆಹಳ್ಳಿದೇವನವರೆಗೆ ಚಿತ್ರಕಲ್ಲದುರ್ಗದ ಪಟ್ಟವಲ್ಲರಿಕಾರರು ಕೊಟ್ಟ ವಂಶಾವಳಿಗೂ ಮತ್ತು ನಿರಂಜನವಂಶರತ್ನಾಕರದೊಳಗಿನ ವಂಶಾವಳಿಗೂ ಹೋಲಿಕೆ ಇದ್ದಂತೆ ಕಂಡು ಬರುವದು. ಆದರೆ ಈ ವಿಷಯದಲ್ಲಿ ಚಿತ್ರಕಲ್ಲದುರ್ಗದ ಪಟ್ಟವಲ್ಲರಿಕಾರರ ವಂಶಾವಳಿಗೂ ಮತ್ತು ಗದುಗಿನ ನಿರಂಜನ ಜಂಗಮವಂಶದರ್ಪಣಕಾರರ ವಂಶಾವಳಿಗೂ ಎಳ್ಳಷ್ಟಾದರೂ ಹೋಲಿಕೆ ಇದ್ದಂತೆ ತೋರುವದಿಲ್ಲ ಕ್ರಿ. ಶ. ೧೫೮೦ರ ಸುಮಾರಿನಲ್ಲಿ ಬರೆದ ಚನ್ನಬಸವ ಪುರಾಣದೊಳಗಿನ ತೋಂಟದ ಸಿದ್ಧೇಶ್ವರನ ಶಿಷ್ಯರಲ್ಲಿ ಒಬ್ಬಿಬ್ಬರ ಹೆಸರನ್ನು ತೆಗೆದುಕೊಂಡು ಮುಂದೆ ಬೇರೆ ಹೆಸರುಗಳನ್ನು ಹಾಕಿದಂತೆ ಕಂಡು ಬರುತ್ತದೆ. ಒಟ್ಟಿನ ಮೇಲೆ ಈ ಎರಡೂ ವಂಶಾವಳಿಗಳಲ್ಲಿ ಕಿಂಚಿತ್ತಾದರೂ ಹೋಲಿಕೆ ಇಲ್ಲವು ಇದೆಲ್ಲಕ್ಕೂ ಅಶಾಸ್ತ್ರೀಯವಾದ ಸಮಯಭೇದವೇ ಮುಖ್ಯ ಕಾರಣವು. ಈ ಸಮಯಭೇದವು ಸುಮಾರು ೧೬ನೇ ಶತಮಾನದ ಪ್ರಾರಂಭಕ್ಕೆ ಆರಂಭವಾದಂತೆ ಐತಿಹಾಸಿಕ ಉದಾಹರಣೆಗಳ ಮೇಲಿಂದ ಕಂಡುಬರುತ್ತದೆ. ಈ ವಿಷಯವಾಗಿ ಜನರಲ್ಲಿ ಅನೇಕ ಕಟ್ಟು ಕಥೆಗಳು ಪ್ರಚಾರದಲ್ಲಿರುವವು. ಅವುಗಳಲ್ಲಿಯ ಕೆಲವು ಉದಾಹರಣೆಗಳನ್ನು ಇಲ್ಲಿ ಕೊಡುತ್ತೇವೆ:—

(೧) ಕ್ರಿ. ಶ. ೧೬೫೦ರ ಸುಮಾರಿನಲ್ಲಿ ಕಟ್ಟಿಗೆಹಳ್ಳಿಸ್ವಾಮಿಗಳೆಂದು ಒಬ್ಬ ಪರಮ ವಿರಕ್ತ ಮಹಾಸ್ವಾಮಿಗಳು ಆಗಿಹೋದರು ಅವರ ಅನುಗ್ರಹ ಶಿಷ್ಯರಾದ ಮುರಿಗೆಯ ಶಾಂತವೀರರೆಂಬವರಿಂದ ಅನುಗ್ರಹ ಹೊಂದಿದ ಇಮ್ಮಡಿ ಮುರಘರಾಜೇಂದ್ರ ( ಸು. ೧೭೭೦ ) ರೆಂಬ ವಿದ್ವಾಂಸರಾದ ಶಿಷ್ಯರಿಗೆ ಕಟ್ಟಿಗೆಹಳ್ಳಿಸ್ವಾಮಿಗಳು ಶಿವಾನುಭವ ಚರಂತಿಕೆಯ ಪಟ್ಟವನ್ನು ಕೊಡಬೇಕೆಂದು ಮೊದಲು ನಿಶ್ಚೈಸಿದ್ದರೂ ಅವರು ಶೀಘ್ರಕೋಪಿಯಿದ್ದದರಿಂದ ಅವರಿಗೆ ಆ ಪಟ್ಟವನ್ನು ಕೊಡಬಾರದೆಂದು ಮತ್ತು ಆದಷ್ಟು ಇವರನ್ನು ತಮ್ಮಿಂದ ದೂರ ಇಡಬೇಕೆಂದು ಸಂಕಲ್ಪಮಾಡಿ, ಪೂರ್ವದಲ್ಲಿ ಶ್ರೀ ಚನ್ನಬಸವೇಶ್ವರದೇವರು ಉಳುವಿಯಲ್ಲಿ ಅಂತರ್ಧಾನವಾಗುವ

ಸಮಯಕ್ಕೆ ಕಲ್ಯಾಣದ ಬಿಜ್ಜಳರಾಜನ ದಂಡಿನಲ್ಲಿ ಮುಸಲ್ಮಾನ ಸರದಾರ ನಾಗಿದ್ದ ಮಲ್ಲೂಖಾನನೆಂಬವನ ಕೈಯಲ್ಲಿ ದಿಲ್ಲಿಯ ಬಾದಶಹನಿಗೆ ಕೊಡುವ ದರ ಸಲುವಾಗಿ ಕೊಟ್ಟ ಸಿಕ್ಕಾಮೋಹರಗಳನ್ನು ತಿರುಗಿ ತರಬೇಕೆಂದು ಮುರುಘಾರಾಜೇಂದ್ರ ಶಿಷ್ಯರಿಗೆ ಅಜ್ಞಾಪಿಸಿದರಂತೆ. ಗುರುವಿನ ಈ ಅಜ್ಞೆಯ ಮೇರೆಗೆ ಆ ಮುರುಘಾರಾಜೇಂದ್ರ ಸ್ವಾಮಿಗಳು ಸಿಕ್ಕಾಮೋಹ ರುಗಳನ್ನು ತರುವದರ ಸಲುವಾಗಿ ದಿಲ್ಲೀಶಹರದ ಕಡೆಗೆ ಹೊರಟರು. ಇತ್ತಕಡೆಗೆ ಆ ಕಟ್ಟಿಗೆಪಳ್ಳಿ ಸ್ವಾಮಿಗಳು ಭಕ್ತವರ್ಗದಲ್ಲಿಯ ಒಂದು ವಟುವನ್ನು ತೆಗೆದುಕೊಂಡು ಆತನಿಗೆ ವೀರಮಾಹೇಶ್ವರ ದೀಕ್ಷೆಯನ್ನು ಕೊಟ್ಟು ಅವನಿಗೆ ಮಹಾಂತಸ್ವಾಮಿಯೆಂದು ಹೆಸರಿಟ್ಟು ಅವನಿಗೆ ತಮ್ಮ ಶಿವಾನುಭವ ಚರಂತಿಕೆಯ ಪಟ್ಟವನ್ನು ಕೊಟ್ಟು ಅವನೊಡನೆ ಬಳ್ಳಾರಿ ಜಿಲ್ಹೆಯೊಳಗಿನ ಹೂವಿನ ಹಡಗಲಿ ತಾಲೂಕಿನ ತಾಮ್ರಹಳ್ಳಿ ಗ್ರಾಮದ ಸೀಮೆಯೊಳಗಿನ ಹಗರೀನದಿಯ ದಂಡೆಯ ಮೇಲಿರುವ ಗಿಡಗಳ ಗುಂಪಿ ನಲ್ಲಿ ಅನುಷ್ಠಾನ ಮಾಡುತ್ತ ಕುಳಿತರು. ಅತ್ತಕಡೆಗೆ ಆ ಮುರುಘಾರಾ ಜೇಂದ್ರ ಸ್ವಾಮಿಗಳು ದಿಗ್ವಿಜಯ ಮಾಡುತ್ತ ದಿಲ್ಲಿಯ ಕಡೆಗೆ ಹೋಗುತ್ತಿ ರುವಾಗ ದಾರಿಯಲ್ಲಿ ಮೊದಕೇರಿ ಗ್ರಾಮದ ಸೀಮೆಯೊಳಗೆ ಒಬ್ಬ ದನಗಾ ಯುವ ಹುಡುಗನು ಶ್ರೀಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು ಶ್ರೀ ಗಳವರು ಆತನನ್ನು ದಯಾಪ್ರದೃಷ್ಟಿಯಿಂದ ನೋಡಿ "ತೀವ್ರವೇ ನೀನು ಈ ಪ್ರಾಂತದ ರಾಜನಾಗುವಿ" ಎಂದು ಆಶೀರ್ವದಿಸಿ ಮುಂದಕ್ಕೆ ಸಾಗಿದರು. ಈ ಆಶೀರ್ವಾದದ ಬಲದಿಂದ ತೀವ್ರವೇ ಆ ದನಗಾಯಿಯು ಮೊದಕೇರಿಯ ನಾಯಕನೆಂಬ ಪ್ರಸಿದ್ಧ ಪಾಳೆಯಗಾರನಾದನು. ಈ ಪ್ರಕಾರ ಆ ಮುರಘಾರಾಜೇಂದ್ರ ಸ್ವಾಮಿಗಳು ಸಂಚಾರದಲ್ಲಿ ಅನೇಕ ಮಹತ್ವದ ಪವಾಡುಗಳನ್ನು ಮಾಡುತ್ತ ಕೆಲವು ಕಾಲದ ನಂತರ ದಿಲ್ಲೀ ಶಹರಕ್ಕೆ ತಲುಪಿದರು ಆ ಸಮಯದಲ್ಲಿ ದಿಲ್ಲಿಯ ಬಾದಶಹನ ಒಂದು ಆನೆಯು ಸತ್ತಿತ್ತು. ಅದನ್ನು ಈ ಮುರಘಾರಾಜೇಂದ್ರ ಸ್ವಾಮಿಗಳು ತಮ್ಮ ಪಾದಸ್ಪರ್ಶದಿಂದ ಜೀವಗೊಳಿಸಿದರು. ಇದನ್ನು ಬಾದಶಹನು ಕೇಳಿ ಆಶ್ಚರ್ಯಚಕಿತನಾಗಿ ಶ್ರೀಗಳವರನ್ನು ಕರೆಯಿಸಿ ಬಹಳ ಗೌರವಿಸಿ ದನು ಮತ್ತು ಶ್ರೀಗಳವರ ಆಜ್ಞೆಯಂತೆ ಹಿಂದಿನ ಸಿಕ್ಕಾಮೋಹರಗಳನ್ನು ಕೊಟ್ಟು ಮೇಲೆ ತನ್ನ ದರ್ಬಾರದಿಂದ ಶಿಖಾಶೈಲಿಗಳೆಂಬ ಎರಡು ಚಿನ್ಹೆ ಗಳನ್ನು ಮನ್ನಣೆಯ ಸಲುವಾಗಿ ಕೊಟ್ಟನು. ಅವುಗಳನ್ನು ಸ್ವೀಕರಿಸಿ

ಸ್ವಾಮಿಗಳು ಆನಂದದಿಂದ ವಿಹಾರಮಾಡುತ್ತ ಬೇರೆ ದಾರಿಯಿಂದ ತಿರುಗಿ ಬರುತ್ತಿರಲು ದಾರಿಯಲ್ಲಿ ಕಲ್ಯಾಣದೊಳಗೆ ಇಳುಕೊಂಡರು. ಅಲ್ಲಿ ಪೂರ್ವದಲ್ಲಿ ಶ್ರೀ ಬಸವಾದಿ ಪ್ರಮಥರ ಕಾಲಕ್ಕೆ ಶ್ರೀಮದನಾದಿ ಅಲ್ಲಮಪ್ರಭುದೇವನು, ಯಾವ ಸ್ಥಾನದಲ್ಲಿ ಶೂನ್ಯಸಿಂಹಾಸನಾರೂಢನಾಗಿದ್ದನೋ ಆ ಸ್ಥಾನದಲ್ಲಿ ಶ್ರೀ ಪ್ರಭುದೇವನ ಹೆಸರಿನಿಂದ ಒಂದು ಮಠವನ್ನು ಕಟ್ಟಿಸಿ ಅದರಲ್ಲಿ ಶೂನ್ಯಸಿಂಹಾಸನವೆಂಬ ಗದ್ದುಗೆಯನ್ನು ಸ್ಥಾಪಿಸಿ ಅದರ ವ್ಯವಸ್ಥೆಗಾಗಿ ಒಬ್ಬ ಚರಮೂರ್ತಿಯನ್ನು ನೇಮಿಸಿ ಆ ಮುರಘಾರಾಜೇಂದ್ರ ಸ್ವಾಮಿಗಳು ತಮ್ಮ ಗುರುವಿನ ಕಡೆಗೆ ಬಂದು ಅವರ ಶೋಧಮಾಡಲಾಗಿ ಅವರು ಇವರಿಗೆ ದೊರಕಲಿಲ್ಲ. ಇತ್ತ ಕಡೆಗೆ ದಿಲ್ಲಿಗೆ ಹೋಗುವಾಗ್ಗೆ ಇವರು ಕೊಟ್ಟ ಆಶೀರ್ವಾದಬಲದಿಂದ ಘನತೆಗೇರಿದ ಮೆದಕೇರಿಯ ನಾಯಕನ ಭೆಟ್ಟಿಯಾಯಿತು. ಆತನು ಶ್ರೀಗಳಿಗೆ ಸಾಷ್ಟಾಂಗನಮಸ್ಕಾರ ಮಾಡಿ ಶ್ರೀಗಳವರು ತನ್ನ ಗ್ರಾಮದಲ್ಲಿ ವಾಸಿಸಬೇಕೆಂದು ಬಿನ್ನವಿಸಿಕೊಂಡನು. ವಿರಕ್ತರು ಒಂದೇ ಸ್ಥಾನದಲ್ಲಿ ನಿರಂತರ ಇರಕೂಡದು, ದಿನಂಪ್ರತಿ ಅವರ ಶಿವಪೂಜೆಯ ಸ್ಥಳವು ಬದಲಾಗತಕ್ಕದ್ದು ಎಂದು ಶ್ರೀಗಳವರು ಹೇಳಲು, ಶ್ರೀಗಳವರ ಇಚ್ಛಾನುಸಾರವಾಗಿ ಶೀಘ್ರದಲ್ಲಿ ಆ ಮೇದಕೆರಿಯ ಪಾಳೆಗಾರನು ಊರಹೊರಗಿನ ಮರಡಿಯ ಮೇಲೆ ಕ್ರಿ. ಶ. ೧೭೨೦ರ ಸುಮಾರಕ್ಕೆ ದಿನಂಪ್ರತಿ ಒಂದೊಂದು ಅಂಕಣದಲ್ಲಿ ಶಿವಪೂಜೆಯನ್ನು ಮಾಡಿದರೆ ಒಂದು ವರ್ಷದವರೆಗೆ ಆ ಮಠದಲ್ಲಿಯೇ ಶಿವಪೂಜೆಯು ನಡೆಯತಕ್ಕದ್ದೆಂಬ ಭಾವನೆಯಿಂದ ೩೬೦ ಅಂಕಣಗಳುಳ್ಳ ಒಂದು ಬಲವಾದ ಶಿಲಾಮಠವನ್ನು ಕಟ್ಟಿಸಿಕೊಟ್ಟು ಶ್ರೀಗಳವರ ಯೋಗಕ್ಷೇಮದ ಸಲುವಾಗಿ ಅವರ ಹೆಸರಿನಿಂದ ಅನೇಕ ಭೂದಾನವನ್ನು ಮಾಡಿದನು. ಈ ಭಕ್ತಿಯ ವೈಭವದಲ್ಲಿ ಆ ಮುರಘಾರಾಜೇಂದ್ರ ಸ್ವಾಮಿಗಳು ತಮ್ಮ ಗುರುವನ್ನು ಮರೆತು ಆನಂದದಿಂದ ಕೆಲವು ಕಾಲ ಅಲ್ಲಿಯೇ ವಾಸಮಾಡಿದರು. ಆದರೆ ತಮಗೆ ಗುರುವಿನಿಂದ ಶಿವಾನುಭವ ಚರಂತಿಕೆಯ ಪಟ್ಟವು ದೊರೆಯಲಿಲ್ಲವೆಂಬುವದರ ಸ್ಮರಣೆಯು ಪದೇ ಪದೇ ಆಗುತ್ತಿತು. ಆದುದರಿಂದ ಮುರಘಾರಾಜೇಂದ್ರ ಸ್ವಾಮಿಗಳು ತಮ್ಮ ಗುರುಗಳಾದ ಕಟ್ಟಿಗೆಹಳ್ಳಿಯ ಸ್ವಾಮಿಗಳ ಶೋಧ ಮಾಡುವದರ ಸಲುವಾಗಿ ಮೆದಕೇರಿಯ ನಾಯಕನಿಗೆ ತಿಳಿಸಿದರು. ಆ ಪಾಳೆಯಗಾರನು ಅವರನ್ನು ಹುಡುಕುವದರ ಸಲುವಾಗಿ ವಿಶ್ವಪ್ರಯತ್ನ ಮಾಡಿದರೂ ಕಡೆಗೆ ಅವನಿಗೆ ಅವರು ದೊರಕಲಿಲ್ಲ. ನಿರಾ

ಶೆಯುಳ್ಳವನಾಗಿ ಮೇದಕೇರಿಯ ನಾಯಕನು ತನ್ನ ಬೀಗನಾದ ಹರಪನ ಹಳ್ಳಿಯ ನಾಯಕನಿಗೆ ಅವನ ರಾಜ್ಯದಲ್ಲಿ ಶೋಧಮಾಡಲಿಕ್ಕೆ ತಿಳುಹಿಸಿದನು. ಆ ಕಾಲಕ್ಕೆ ತಾಮ್ರಹಳ್ಳಿ ಗ್ರಾಮವು ಹರಪನಹಳ್ಳಿಯ ನಾಯಕನ ಸೀಮೆಗೆ ಸೇರಿತ್ತು. ಶೋಧಮಾಡಲಾಗಿ ಆ ಉಭಯ ಗುರುಶಿಷ್ಯರು ಮೇಲೆ ಹೇಳಿದ ಸ್ಥಾನದಲ್ಲಿ ಅನುಷ್ಠಾನ ಮಾಡುತ್ತ ಕುಳಿತಿದ್ದರು. ಈ ವಾರ್ತೆಯು ಹರಪನಹಳ್ಳಿಯ ನಾಯಕನಿಂದ ಮೇದಕೇರಿಯ ನಾಯಕನಿಗೆ ತಿಳಿದಕೂಡಲೆ ಈ ನಾಯಕರ ಸಹಾಯದಿಂದ ತಮ್ಮ ಗುರುಗಳನ್ನು ತೆಗೆದುಕೊಂಡು ಹೋಗಬೇಕೆಂದು ಮುರಘಾರಾಜೇಂದ್ರ ಸ್ವಾಮಿಗಳು ತಾಮ್ರಹಳ್ಳಿಗೆ ಬಂದು ಮಂಚದ ಮೇಲೆ ನಿದ್ರೆಹತ್ತಿ ಮಲಗಿದ ಕಟ್ಟಿಗೆಹಳ್ಳಿಸ್ವಾಮಿಗಳನ್ನು ಮಂಚ ಸಹಿತವಾಗಿ ರಾತ್ರಿಯಲ್ಲಿಯೇ ತೆಗೆದುಕೊಂಡು ಹೋಗುವಾಗ್ಗೆ ಹಾನಗಲ್ಲ ತಾಲೂಕಿನಲ್ಲಿಯ ತಿಳುವಳ್ಳಿ ಗ್ರಾಮದ ಹತ್ತರ ಬೆಳಗಾಯಿತು. ಗುರುಗಳು ಎಚ್ಚತ್ತು ನೋಡಲಾಗಿ ತಮ್ಮ ಸಮ್ಮುಖದಲ್ಲಿ ಮಹಾಂತಸ್ವಾಮಿಯೆಂಬ ಶಿಷ್ಯನ ಬದಲು ಮೊದಲಿಗೆ ಬೇಡಾದ ಮುರಘಾರಾಜೇಂದ್ರನೆಂಬ ಶಿಷ್ಯನು ಇದ್ದದ್ದು ಕಂಡು ಗುರುವಿಗೆ ಬಹಳೇ ಸಂತಾಪವಾಯಿತು. ಆದರೆ ಆ ಮುರಘಾರಾಜೇಂದ್ರನ ಸವಿನಯೋಕ್ತಿಗಳಿಂದ ಆ ಗುರುವಿನ ಕೋಪವು ಬಯಲಾಯಿತು. ಆ ಮೇಲೆ ಮುರಘಾರಾಜೇಂದ್ರ ಸ್ವಾಮಿಗಳು ಶಿವಾನುಭವ ಚರಂತಿಕೆಯ ಪಟ್ಟವನ್ನು ತಮಗೆ ಕೊಡಬೇಕೆಂದು ಗುರುವಿಗೆ ಬೇಡಿಕೊಂಡರು. ಆದರೆ ಆ ಚರಂತಿಕೆಯ ಪಟ್ಟವು ಈ ಮೊದಲೇ ಮಹಾಂತನೆಂಬವನಿಗೆ ಕೊಟ್ಟದ್ದರಿಂದ ಇನ್ನು ಮೇಲೆ ಅವನ್ನು ನಿಮಗೆ ಕೊಡಲಿಕ್ಕೆ ಬರಲಾರದು ಎಂದು ಗುರುಗಳು ನುಡಿದ ಕೂಡಲೆ ಅವರಿಗೆ ನಮಸ್ಕರಿಸಿ ಸಿಟ್ಟಿನಿಂದ ಆ ಮುರಘಾರಾಜೇಂದ್ರಸ್ವಾಮಿಗಳು ಹೊರಟು ಹೋಗಿ ಮುಂದೆ ತಮ್ಮ ಕೆಲವು ಅನುಯಾಯಿಗಳನ್ನು ಕೂಡಿಕೊಂಡು ಅವರ ಸಹಾಯದಿಂದ ತಾವೇ ಮುಖ್ಯ ಗುರುಗಳೆಂದು ಸಾರಿ ೧೭ನೆಯ ಶತಮಾನದ ಪ್ರಾರಂಭಕ್ಕೆ ದಿಗ್ವಿಜಯವನ್ನು ಆರಂಭಿಸಿದರು. ಇದರಿಂದ ಮುರಿಗಿಯೆಂಬ ಸಮಯವು ಉತ್ಪನ್ನವಾಯಿತು. ಇತ್ತ ಕಡೆಗೆ ಆ ಮಹಾಂತಸ್ವಾಮಿಗಳು ತಾವೂ ಸ್ವತಂತ್ರರಾಗಿ ಭಕ್ತೋದ್ಧಾರದ ಕಾರ್ಯಗಳನ್ನು ಮಾಡಲು ಪ್ರಾರಂಭಿಸಿದ್ದರಿಂದ ಇವರೇ ಚೀಲಾಳ ಸಮಯದವರೆಂದೆನ್ನಿಸಿಕೊಂಡರು. ಒಟ್ಟಿನ ಮೇಲೆ ಮೊದಲು ಒಂದರಲ್ಲಿ ಮುರಿಗಿ ಮತ್ತು ಚಿಲ್ಲಾಳವೆಂಬ ಎರಡು ಸಮಯಭೇದಗಳಾದವು. ಮೇದಕೇರಿಯ ನಾಯಕನ ಸಹಾಯದಿಂದ ಆ ಮುರಘಾರಾಜೇಂದ್ರ ಸ್ವಾಮಿಗಳು

ದೊಡ್ಡ ಘನತೆಗೇರಿದರು. ಮತ್ತು ಇತ್ತ ಕಡೆಗೆ ಈ ಉಭಯ ಶಿಷ್ಯರ ಉಪದ್ರವಕ್ಕೆ ಹೆದರಿ ಕಟ್ಟಿಗೆಹಳ್ಳಿ ಸ್ವಾಮಿಗಳು ಕ್ರಿ. ಶ. ೧೬೭೫ರ ಸುಮಾರಕ್ಕೆ ತಿಳುವಳ್ಳಿಯಲ್ಲಿ ಸಮಾಧಿಸ್ಥರಾದರು ಅವರು ಲಿಂಗೈಕ್ಯರಾದ ಮೇಲೆ ಅವರ ಪ್ರೀತಿಯ ಶಿಷ್ಯರಾದ ಮಹಾಂತಸ್ವಾಮಿಗಳು ಅರ್ಧನಾರೀಶ್ವರನೆಂಬ ಒಬ್ಬ ಶಿಷ್ಯೋತ್ತಮನಿಗೆ ತಮ್ಮ ಚರಂತಿಕೆಯ ಪಟ್ಟಾಧಿಕಾರವನ್ನು ಕೊಟ್ಟು ಬಳಿಕ ತಾಮ್ರಹಳ್ಳಿಯಲ್ಲಿ ಸಮಾಧಿಸ್ಥರಾದರು. ಹಗರೀನದಿಯ ದಂಡೆಯಮೇಲೆ ಅವರ ಸಮಾಧಿಯು ಈಗ್ಯೂ ಇರುವದು. ಈ ಅರ್ಧನಾರೀಶ್ವರ ಸ್ವಾಮಿಗಳು ಕೆಳದೀರಾಜ್ಯದಲ್ಲಿ ಸೇರಿ ಅಲ್ಲಿಯ ವೀರಶೈವ ರಾಜನ ಆಶ್ರಯದಲ್ಲಿದ್ದರು ಇವರಿಂದ ಕೆಳದಿಯ ರಾಜನಿಗೆ ಉಪದೇಶವಾಗಿತ್ತು ಕೆಳದಿಯ ಸೋಮಶೇಖರರಾಜನು ಮರಣಹೊಂದಿದ ಮೇಲೆ ಆತನ ರಾಣಿಯಾದ ಚೆನ್ನಮ್ಮಾಜಿಯು ಮೈಸೂರ ಅರಸನ ಸಹಾಯದಿಂದ ಕೆಲವು ದಿವಸಗಳವರೆಗೆ ಉತ್ತಮರೀತಿಯಿಂದ ರಾಜ್ಯವಾಳಿ ಕಡೆಗೆ ಬಸಪ್ಪನಾಯಕನೆಂಬವನನ್ನು ದತ್ತಕ ತೆಗೆದುಕೊಂಡಳು. ಈ ಬಸಪ್ಪನಾಯಕನ ಆಳಿಕೆಯಲ್ಲಿ ಕ್ರಿ. ಶ ೧೭೬೩ರ ಸುಮಾರಿನಲ್ಲಿ ಹೈದರಲ್ಲಿಯು ಅವನ ಮೇಲೆ ದಂಡೆತ್ತಿ ಹೋಗಿ ಕೆಳದೀ ರಾಜ್ಯವನ್ನು ಗೆದ್ದು, ಕೈವಶಮಾಡಿಕೊಂಡು ಅಲ್ಲಿಂದ ಅಪಾರವಾದ ಸಂಪತ್ತನ್ನು ಒಯ್ದನು. ಈ ಗೊಂದಲದಲ್ಲಿ ಬಸಪ್ಪನಾಯಕನು ತನ್ನ ಸ್ವಂತ ಮುತ್ತುರತ್ನಾದಿ ಬೆಲೆಯುಳ್ಳ ಎಲ್ಲ ಸಾಮಾನುಗಳನ್ನು ತನ್ನ ಉಪದೇಶ ಗುರುವಿಗೆ ಮುಟ್ಟಿಸಬೇಕೆಂದು ಒಂಟೆಗಳ ಮೇಲೆ ಹೇರಿ ಮಠದೊಳಗಿನ ಶಿಷ್ಯರ ಕೂಡ ಆ ಒಂಟೆಗಳನ್ನು ಗುರುವಿನ ಕಡೆಗೆ ಕಳುಹಿಸಿದನು. ಆ ಸಮಯಕ್ಕೆ ಗುರುಗಳು ಡಂಬಳದಲ್ಲಿದ್ದರು. ಇದೇ ಕಾಲಕ್ಕೆ ಹೈದರನು ಬಸಪ್ಪನಾಯಕನಿಗೂ ಆತನ ತಾಯಿಯಾದ ಚೆನ್ನಮ್ಮಾಜಿಗೂ ಕೈದು ಮಾಡಿ ಒಂದು ಕಿಲ್ಲೆಯಲ್ಲಿ ಇಟ್ಟನು. ಆ ಕಾಲದಲ್ಲಿ ಕೆಳದಿಯೊಳಗೆ ಮರತೂರ ಮಂಡೀ ಬಸವಶೆಟ್ಟಿ ಎಂಬೊಬ್ಬ ವೀರಶೈವ ವ್ಯಾಪಾರಸ್ಥನಿದ್ದನು. ಈ ಮರತೂರ ಶೆಟ್ಟಿಗಾದರೂ ಅದೇ ಅರ್ಧನಾರೀಶ್ವರ ಸ್ವಾಮಿಗಳ ಕಡೆಯಿಂದ ಉಪದೇಶವಾಗಿತ್ತು ಹೇರಿ ಕಳುಹಿಸಿದಂಥ ಕೆಲವು ಒಂಟೆಗಳು ತಪ್ಪಿಸಿಕೊಂಡು ಮರತೂರ ಬಸಪ್ಪಶೆಟ್ಟಿಯ ವಖಾರಿನಲ್ಲಿ ಬಂದವು. ಆತನು ಅವುಗಳ ಮೇಲಿಂದ ಮುತ್ತು ರತ್ನಾದಿಗಳನ್ನು ಇಳಿಸಿಕೊಂಡು ಆ ಒಂಟೆಗಳನ್ನು ಹೊರಗೆ ಹೊಡೆದನು. ಸ್ವಾಮಿಗಳ ಶಿಷ್ಯರು ಒಂಟೆಗಳನ್ನು ತರುತ್ತಿರಲಾಗಿ ದಾರಿಯಲ್ಲಿ ಕಪ್ಪತ್ತಗುಡ್ಡದೊಳಗೆ ಕೆಲವು ಒಂಟೆಗಳು ತಪ್ಪಿಸಿಕೊಂಡವು. ಉಳಿದವುಗಳನ್ನು

ಮಠಕ್ಕೆ ಹರುತ್ತಿರಲಾಗಿ ನಿರಿಚ್ಛರಾದ ಸ್ವಾಮಿಗಳು ಆ ದ್ರವ್ಯವನ್ನು ಮಠ ದೊಳಗೆ ತರಗೊಡಲಿಲ್ಲ. ಸ್ವಾಮಿಗಳಿಗೆ ಗೊತ್ತಾಗದಂತೆ ಆ ಶಿಷ್ಯರು ಆ ದ್ರವ್ಯವನ್ನು ಬೇರೆ ಸ್ಥಳದಲ್ಲಿ ಹೂಳಿಟ್ಟರು. ಇಷ್ಟರಲ್ಲಿ ಮಹಾಂತಸ್ವಾಮಿ ಗಳು ಹಂಪಸಾಗರದಲ್ಲಿ ಸಮಾಧಿಸ್ಥರಾದರು. ಕೆಳದಿಯೊಳಗಿನ ಅನಾಯ ಕತ್ವಕ್ಕೆ ಹೆದರಿ ಮರತೂರ ಬಸಪ್ಪಶೆಟ್ಟಿಯು ಕೂಡ ಹಂಪಸಾಗರದಲ್ಲಿ ಬಂದು ನಿಂತನು. ಮುಂದೆ ಆ ಶೆಟ್ಟಿಯು ಆ ಸಂಪತ್ತಿನ ಬಲದಿಂದ ಅನೇಕ ಸ್ಥಾನಗಳಲ್ಲಿ ಅನೇಕ ಶೆಟ್ಟಿಗಳನ್ನು ನಿಯಮಿಸಿ ಅವರ ಕಡೆಯಿಂದ ಅನೇಕ ಪೇಟಿಗಳನ್ನು ಸ್ಥಾಪಿಸಿ ದೊಡ್ಡ ಪ್ರಮಾಣದಿಂದ ವ್ಯಾಪಾರವನ್ನು ಪ್ರಾರಂಭಿಸಿದನು. ಆತನ ಕೈಕೆಳಗೆ ೬೪ ಶೆಟ್ಟಿಗಳಿದ್ದರೆಂದು ಜನರು ಹೇಳು ವರು. ಅಂದಮೇಲೆ ಸಂಸ್ಥಾನಿಕರಂತೆ ಇದ್ದ ಈ ಮರತೂರ ಶೆಟ್ಟಿಯ ಸಹಾಯದಿಂದ ಚೀಲಾಳ ಸಮಯದ ಸ್ವಾಮಿಗಳು ಗದುಗಿನಲ್ಲಿ ಬಂದು ನಿಂತರು. ಈ ಗದಗು ಹಿಂದಿನ ಕಾಲದಲ್ಲಿ ಕೃತಪುರವೆಂದು ಪ್ರಸಿದ್ಧವಾ ಗಿತ್ತು. ಇದರೊಳಗಿನ ತ್ರಿಕೂಟೇಶ್ವರ ಮತ್ತು ವೀರನಾರಾಯಣ ಈ ಎರಡು ಪುರಾತನ ಗುಡಿಗಳಿಂದಲೂ ಮತ್ತು ಅವುಗಳೊಳಗಿನ ಶಿಲಾಲೇಖ ಗಳಿಂದಲೂ ಇದು ಬಹಳ ಪುರಾತನ ಗ್ರಾಮವಿದ್ದಂತೆ ಕಂಡು ಬರುತ್ತದೆ. ಆದರೆ ಕ್ರಿ. ಶ ೧೮೩೭ರ ಸುಮಾರಕ್ಕೆ ಇದು ಕೇವಲ ೮೦೦ ಮನೆಗಳು ಮತ್ತು ೧೩ ಅಂಗಡಿಗಳುಳ್ಳ ಒಂದು ದಂಡಿನ ಸ್ಥಾನವಾಗಿತ್ತು ಎಂದು ಕರ್ನಲ್ ಕ್ಲ್ಯಾನ ಇವರು ಅಂದಿರುವರು ಕ್ರಿ. ಶ. ೧೮೪೬ರಿಂದ ಗದಗು ಬೆಳೆಯುತ್ತ ನಡೆಯಿತು. ಆ ಸಮಯಕ್ಕೆ ಅಲ್ಲಿ ಈಗಿರುವ ತೋಂಟದ ಸ್ವಾಮಿಗಳ ದೊಡ್ಡ ಮಠವು ಇದ್ದಿಲ್ಲವು ಈ ಮಠಕ್ಕೆ ಪ್ರತಿವರುಷ ಸುಮಾರು ೨೫-೩೦ ಸಾವಿರ ರೂಪಾಯಿಗಳವರೆಗೆ ಉತ್ಪನ್ನವಿದ್ದು ಅದು ಈಗ ಅತಿಶಯ ವೈಭವದಿಂದಿರುವದು. ಈ ಮಠದ ಸ್ವಾಮಿಗಳೇ ಸದ್ಯಕ್ಕೆ ಚೀಲಾಳ ಸಮಯದ ಮುಖ್ಯಸ್ಥರೆಂದೆನಿಸಿಕೊಳ್ಳುವರು.

(೨) ಪೂರ್ವದಲ್ಲಿ ಕಟ್ಟಿಗೆಹಳ್ಳಿಸ್ವಾಮಿಗಳಿಗೆ ನೋಡಸಿದ್ಧಲಿಂಗ ದೇವರು ಮತ್ತು ಮುರಘಾರಾಜೇಂದ್ರ ಸ್ವಾಮಿಗಳೆಂದು ಉಭಯ ಶಿಷ್ಯರಿ ದ್ದರು ಈ ಉಭಯತರು ಮಹಾವಿದ್ವಾನರೂ ತಪಸ್ವಿಗಳೂ ಆಗಿದ್ದು ಒಡಹುಟ್ಟಿದವರಂತೆ ಇರುತ್ತಿದ್ದರು. ಇವರ ಗುರುಗಳು ಒಂದು ದಿವಸ ಮೇಲೆ ಹೇಳಿದಂತೆ ದಿಲ್ಲೀಶಹರಕ್ಕೆ ಹೋಗಿ ಸಿಕ್ಕಾಮೊಹರುಗಳನ್ನು ತರುವದಕ್ಕೆ ಆಜ್ಞಾಪಿಸಿದರು. ಗುರುವಿನ ಆಜ್ಞೆಯಂತೆ ಉಭಯ

ತರೂ ಹೊರಟರು. ಈರ್ವರು ಬೇರೆ ಬೇರೆ ಮಾರ್ಗಗಳಿಂದ ದಿಗ್ವಿಜಯ ಮಾಡುತ್ತ ದಿಲ್ಲಿಗೆ ಹೊರಟಾಗ್ಗೆ ದಾರಿಯಲ್ಲಿ ಮೆದಕೇರಿಯೊಳಗೆ ಒಬ್ಬ ದನ ಕಾಯುವವನಿಗೆ ನೀನು ರಾಜನಾಗುವಿಯೆಂದು ಮುರಘಾರಾಜೇಂದ್ರ ಸ್ವಾಮಿಗಳು ಆಶೀರ್ವದಿಸಿದರು. ಹೀಗೆ ಉಭಯತರು ದಿಲ್ಲೀ ಶಹರಕ್ಕೆ ಮುಟ್ಟಿದ ಮೇಲೆ ಅಲ್ಲಿ ಈರ್ವರು ಅನೇಕ ಪವಾಡಗಳನ್ನು ಮಾಡಿ, ಬಾದಶಹನ ಸತ್ತ ಆನೆಯನ್ನು ಜೀವಗೊಳಿಸಿದರು. ಇದನ್ನು ಕೇಳಿ ಬಾದ ಶಹನು ಈರ್ವರಿಗೂ ಮರ್ಯಾದೆಯನ್ನು ಮಾಡಿ ಸಿಕ್ಕಾ ಮೋಹರುಗಳನ್ನು ಕೊಟ್ಟಿದ್ದಲ್ಲದೆ ಶಿಖಾಶೈಲಿಗಳನ್ನು ಸಹಕೊಟ್ಟನು. ತಿರುಗಿ ಬರುವಾಗ್ಗೆ ಉಭಯತರು ಕಲ್ಯಾಣದಲ್ಲಿ ಶ್ರೀಪ್ರಭುದೇವರ ಮಠವನ್ನು ಕಟ್ಟಿಸಿ ಅದರ ವ್ಯವಸ್ಥೆಗಾಗಿ ಒಬ್ಬ ಚರಮೂರ್ತಿಯನ್ನು ನಿಯಮಿಸಿದರು. ಮುಂದೆ ಗುರುಗಳ ಹತ್ತರ ಬಂದು ಆದ ವೃತ್ತಾಂತವನ್ನೆಲ್ಲ ಹೇಳಿ, ತಂದ ವಸ್ತು ಗಳನ್ನು ಅವರ ಮುಂದೆ ಇರಿಸಿದರು. ಆದರಿಂದ ಗುರುಗಳು ಸಂತುಷ್ಟ ರಾಗಿ ಅವರನ್ನು ಪೂರ್ವದಕ್ಕಿಂತಲೂ ಹೆಚ್ಚು ಪ್ರೀತಿಸಹತ್ತಿದರು. ಹೀಗಿ ರುತ್ತಿರಲು ಒಂದು ದಿವಸ ಮುರಘಾರಾಜೇಂದ್ರ ಸ್ವಾಮಿಗಳ ಪೂರ್ವಾಶ್ರ ಮದ ಮನೆತನದೊಳಗಿನವನೊಬ್ಬನು ಭವಿಜನರ ಸಂಗಡ ಸಾಮರಸ್ಯ ಮಾಡಿದನೆಂದು ತಿಳಿದು ಬಂತು. ಈ ಸುದ್ದಿಯು ಹಬ್ಬಿದ ಕೂಡಲೆ ಕೆಲವು ಭಕ್ತ ಮಾಹೇಶ್ವರರು ಕೂಡಿ ಆತನಿಗೆ ಬಹಿಷ್ಕಾರ ಹಾಕಿದರು. ಇದು ಗೊತ್ತಿದ್ದರೂ ಜನರ ಕಡೆಗೆ ದುರ್ಲಕ್ಷ ಮಾಡಿ ಆ ಮುರಘಾರಾಜೇಂದ್ರ ಸ್ವಾಮಿಗಳು ಪೂರ್ವಾಶ್ರಮದ ಪ್ರೇಮದಿಂದ ಆತನಿಗೆ ಪ್ರಾಯಶ್ಚಿತ್ತ ಕೊಡಿಸಿ ಶುದ್ಧಮಾಡಿಸಿ ಆತನ ಸಂಗಡ ಬಳಿಕೆ ಮಾಡಹತ್ತಿದರು ಇದನ್ನು ನೋಡಿ ನೋಡಸಿದ್ಧಲಿಂಗದೇವರಿಗೆ ಕೋಪ ಬಂದಿತು. ಏಕಂದರೆ ಹುಟ್ಟ ಭವಿಯನ್ನು ಶುದ್ಧಗೊಳಿಸಬಹುದು ಆದರೆ ಕೆಟ್ಟ ಭವಿಯನ್ನು ಶುದ್ಧಗೊಳಿ ಸಲಾಗದು. ಮತ್ತು ನಿರಂಜನ ವಿರಕ್ತಮೂರ್ತಿಗಳು ಇದರಂತೆ ತಮ್ಮ ಪೂರ್ವಾಶ್ರಮದೊಳಗಿನ ಜನರ ಮೇಲೆ ಪ್ರೀತಿಯನ್ನು ಇಡಕೂಡದೆಂದು ಹೇಳಿ ಸಿಟ್ಟಿನಿಂದ ಹೊರಬಿದ್ದು, ಅವರ ಸಂಪರ್ಕವನ್ನು ಬಿಟ್ಟುಕೊಟ್ಟು ಸೋದೀರಾಜನ ಆಶ್ರಯಕ್ಕೆ ಬಂದು ನಿಂತರು. ಅತ್ತಕಡೆಗೆ ಆ ಮುರಘಾ ರಾಜೇಂದ್ರಸ್ವಾಮಿಗಳು ತಮ್ಮ ಕೃತ್ಯವು ಯಥೋಚಿತ ಮತ್ತು ಶಾಸ್ತ್ರೋ ಕ್ತವೆಂದು ಮತ್ತು ಆದರಲ್ಲಿ ತಮ್ಮದೇನೂ ತಪ್ಪಿಲ್ಲವೆಂದು ತಿಳಕೊಂಡು ಹಠದಿಂದ ಮೆದಕೇರಿಗೆ ಹೋಗಿ ತಾವು ಹಿಂದಕ್ಕೆ ದಿಲ್ಲಿಗೆ ಹೋಗುವಾಗ್ಗೆ

ಆಶೀರ್ವಾದ ಕೊಟ್ಟ ದನಕಾಯುವವನು ಮೆದಕೇರಿಯ ನಾಯಕನಾಗಿರುವ
ದರಿಂದ ಆವನ ಆಶ್ರಯದಲ್ಲಿ ನಿಂತರು. ಅಲ್ಲಿ ಆ ರಾಜನು ಇವರನ್ನು
ಅತಿಶಯವಾಗಿ ಗೌರವಿಸಿ ತನ್ನ ಬಳಿಯಲ್ಲಿ ಇಟ್ಟುಕೊಂಡು ಕೆಲವು ದಿವಸ
ಗಳ ಮೇಲೆ ಶ್ರೀಗಳವರ ಇಚ್ಛೆಯ ಮೇರೆಗೆ ೧೫ನೆಯ ಶತಮಾನದಲ್ಲಿ ಚಿತ್ರ
ಕಲ್ಲದುರ್ಗದ ಊರಹೊರಗಿನ ಮರಡಿಯ ಮೇಲೆ ೨೬೦ ಅಂಕಣಗಳುಳ್ಳ
ಒಂದು ವಿಶಾಲವಾದ ಮಠವನ್ನು ಕಟ್ಟಿಸಿ ಅದಕ್ಕೆ ಅನೇಕ ಭೂಮಿಗಳನ್ನು
ಕೊಟ್ಟನು. ಈ ಪ್ರಕಾರ ಮುರಘಾರಾಜೇಂದ್ರ ಸ್ವಾಮಿಗಳು ಚಿತ್ರಕಲ್ಲ
ದುರ್ಗದ ಮಠದಲ್ಲಿರುತ್ತಿರಲು ಇವರ ಮತ್ತು ನೋಡಸಿದ್ಧಲಿಂಗದೇವರ
ವೈಮನಸ್ಸು ಹೆಚ್ಚಿಗೆ ಬೆಳೆಯಿತು. ಇದನ್ನು ಕಂಡು ಅವರ ಗುರುಗಳಾದ
ಕಟಿಗೆಹಳ್ಳಿಸ್ವಾಮಿಗಳು ಹಾನಗಲ್ಲ ತಾಲೂಕಿನ ತಿಳುವಳ್ಳಿಯಲ್ಲಿ ಸಮಾಧಿ
ಸ್ಥರಾದರು. ಈ ಉಭಯತರಿಗೂ ಗುರುವಿನಿಂದ ಚರಂತಿಕೆಯ ಪಟ್ಟ
ದೊರೆಯಲಿಲ್ಲ. ಮುಂದೆ ಮುರಘಾರಾಜೇಂದ್ರಸ್ವಾಮಿಗಳು ಇಮ್ಮಡಿ
ಗುರುಸಿದ್ಧಸ್ವಾಮಿಯನ್ನೂ ಮತ್ತು ನೋಡಸಿದ್ಧಲಿಂಗದೇವರು ಕುಮಾರ
ಸ್ವಾಮಿಯನ್ನೂ ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಗುರು
ಗಳಂತೆ ಈ ಉಭಯ ಶಿಷ್ಯರಲ್ಲಿಯೂ ವೈರತ್ವವು ಹೆಚ್ಚಿತು. ಇಮ್ಮಡಿ
ಗುರುಸಿದ್ಧಸ್ವಾಮಿಗಳು ಕುಮಾರಸ್ವಾಮಿಗಳ ವರ್ಚಸ್ಸನ್ನು ಕಡಿಮೆ ಮಾಡ
ಬೇಕೆಂದು ಕೆಲವು ಜನ ಸಹಾಯಕರೊಂದಿಗೆ ಘಟ್ಟದ ಮೇಲೆ ಬಂದು ವಾಸ
ಮಾಡಿದರು. ಕುಮಾರಸ್ವಾಮಿಗಳಿಂದ ಹುಬ್ಬಳ್ಳಿಯ ಬಸಪ್ಪಶೆಟ್ಟಿ
ಯೆಂಬ ಒಬ್ಬ ಶ್ರೀಮಂತನಿಗೆ ಉಪದೇಶವಾಗಿತ್ತು. ಆತನ ಸಹಾಯ
ದಿಂದ ಇವರು ಕೂಡ ಬಹಳೇ ಬಲಾಢ್ಯರಾಗಿದ್ದರು. ಒಂದು ದಿವಸ
ವ್ಯಾಪಾರದ ನಿಮಿತ್ಯವಾಗಿ ಘಟ್ಟದ ಕೆಳಗೆ ಈ ಹುಬ್ಬಳ್ಳಿಯ ಶೆಟ್ಟಿಯು
ಹೋಗುತ್ತಿರಲು ದಾರಿಯಲ್ಲಿ ಆತನಿಗೆ ಇಮ್ಮಡಿ ಗುರುಸಿದ್ಧಸ್ವಾಮಿಗಳ
ದರ್ಶನವಾಯಿತು. ಸ್ವಾಮಿಗಳಿಗೆ ಸಾಷ್ಟಾಂಗನಮಸ್ಕರಿಸಿ ಮುಂದೆ
ಕೂಡ್ರಲು ಸ್ವಾಮಿಗಳು ಪ್ರಸಾದಕ್ಕೆ ಆತನಿಗೆ ಬಹಳ ಆಗ್ರಹಮಾಡಿದರು.
ಈ ಮೊದಲೇ ತಮ್ಮ ಗುರುಗಳ ಕಡೆಯಿಂದ ಎಲ್ಲ ಸಂಗತಿಯು ಗೊತ್ತಾಗಿ
ದ್ದರಿಂದ ಆತನು ಪ್ರಸಾದ ಸೇವಿಸಲಿಲ್ಲ. ಇಮ್ಮಡಿ ಗುರುಸಿದ್ಧಸ್ವಾಮಿಗಳು
ಹೆಚ್ಚಿಗೆ ಆಗ್ರಹ ಮಾಡಲು, ತಮ್ಮ ಗುರುಗಳು ಹಿಂದಕ್ಕೆ ಭವಿಗಳ
ಬಳಿಕೆಯನ್ನು ಮಾಡಿರುವದರಿಂದ ನಾನು ತಮ್ಮಲ್ಲಿ ಪ್ರಸಾದ ತೆಗೆದುಕೊ
ಳ್ಳಲಾರೆನೆಂದು ಸ್ಪಷ್ಟವಾಗಿ ಹೇಳಿದನು. ಇದನ್ನು ಕೇಳಿ ಸಿಟ್ಟಿನಿಂದ ಇಮ್ಮಡಿ

ಗುರುಸಿದ್ಧಸ್ವಾಮಿಗಳು "ನಿನ್ನ ಮನೆಯು ಹೊಲಗೇರಿಯಾಗಲಿ" ಎಂದು ಶಾಪಕೊಟ್ಟರು. ಈ ಸೆಟ್ಟಿಯು ತನ್ನ ಮೇಲೆ ಬಲವತ್ತರವಾದ ಕುಮಾರ ಸ್ವಾಮಿಗಳ ಕೃಪಾಬಲವಿದ್ದದ್ದರಿಂದ ಗಾಬರಿಯಾಗದೆ ಕುಮಾರಸ್ವಾಮಿ ಗಳ ಕಡೆಗೆ ಹೋಗಿ ಆದ ವೃತ್ತಾಂತವನ್ನೆಲ್ಲ ಅರುಹಿದನು. ಅದಕ್ಕೆ "ನಿನ್ನ ಜೀವವು ಭವಿಜನರ ಕೈಯಿಂದ ಹೋಗಲಿ" ಎಂದು ನೀನು ಆ ಇಮ್ಮಡಿ ಗುರುಸಿದ್ಧಸ್ವಾಮಿಗಳಿಗೆ ಮರಳಿ ಶಾಪಕೊಟ್ಟು ಬಂದು ಆ ಸ್ವಾಮಿ ಗಳ ಶಾಪಕ್ಕನುಸಾರವಾಗಿ ಈಗಿಂದೀಗ ನಿನ್ನ ಮನೆ ಇರುವ ಸ್ಥಾನದಲ್ಲಿ ಹೊಲಗೇರಿಯನ್ನು ಸ್ಥಾಪಿಸಿ ಬೇರೊಂದು ಹೊಸ ಹುಬ್ಬಳ್ಳಿಯೆಂಬ ಗ್ರಾಮ ವನ್ನು ಸ್ಥಾಪಿಸೆಂದು ಕುಮಾರಸ್ವಾಮಿಗಳು ಆ ಸೆಟ್ಟಿಗೆ ಹೇಳಿದರು. ಆ ಸಮಯಕ್ಕೆ ಉಭಯ ಪಕ್ಷದ ಅನೇಕ ಜನರು ಇಮ್ಮಡಿ ಗುರುಸಿದ್ಧಸ್ವಾಮಿ ಗಳ ಬಳಿಯಲ್ಲಿ ಸೇರಿದರು. ಅವರೊಳಗೆ ಕಲಹಗಳು ಆರಂಭವಾಗಿ ಅದ ರಲ್ಲಿ ಒಬ್ಬಿಬ್ಬ ವಿರಕ್ತ ಮೂರ್ತಿಗಳು ಮಡಿದರು. ಇಮ್ಮಡಿ ಗುರುಸಿದ್ಧಸ್ವಾ ಮಿಗಳು ಮೇಣೆಯೊಳಗಿಂದ ಹೋಗುತ್ತಿರಲು ಅನಂತಪುರದ ಸೀಮೆಯಲ್ಲಿ ಭವಿಜನರ ಕಡೆಯಿಂದ ಅವರ ವಧೆಯಾಯಿತು. ಅವರ ಸಮಾಧಿಯು ಅನಂತಪುರದಲ್ಲಿರುವದು. ನೋಡಸಿದ್ಧಲಿಂಗದೇವರು ಜವೇ ಎಂಬ ಗ್ರಾಮ ದಲ್ಲಿ ಸಮಾಧಿಸ್ಥರಾದರು. ಮುರಘಾರಾಜೇಂದ್ರಸ್ವಾಮಿಗಳು ಚಿತ್ರಕಲ್ಲ ದುರ್ಗದ ಮಠದಲ್ಲಿ ಸಮಾಧಿ ಹೊಂದಿದರು. ಈ ವಿರಕ್ತರೊಳಗಿನ ಕಲ ಹದ ದ್ಯೋತಕವೇ ಸಿರಸಿಯಿಂದ ೬ ಮೈಲುಗಳ ಅಂತರದಲ್ಲಿರುವ ಇಸು ಳೂರೊಳಗಿನ ಮೂವರು ವಿರಕ್ತರ ಸಮಾಧಿಗಳು.

ಹಿಂದಕ್ಕೆ ಹಳೇಹುಬ್ಬಳ್ಳಿಯಲ್ಲಿ ಕಲ್ಯಾಣಸೆಟ್ಟಿ ಎಂಬ ಹೆಸರಿನ ಒಬ್ಬ ಪ್ರಮುಖ ಶ್ರೀಮಂತ ಲಿಂಗಾಯತನಿದ್ದನು. ಆತನಿಗೆ ಬಸಪ್ಪನೆಂಬ ಒಬ್ಬ ಸೋದರಳಿಯನಿದ್ದನು. ಅಳಿಯಮಾವಂದಿರಲ್ಲಿ ವೈಮನಸ್ಸುಂಟಾಗಿ ಅಳಿ ಯನು ಕೆಲವು ಅನುಯಾಯಿಗಳೊಡನೆ ಜೊಮ್ಮಾಪುರದ ಸೀಮೆಯಲ್ಲಿ ಹೋಗಿ ನಿಂತನು. ಕ್ರಿ. ಶ. ೧೭೨೭ರಲ್ಲಿ ಈ ಬಸಪ್ಪನು ಹಳೇಹುಬ್ಬಳ್ಳಿಯ ಕಿಲ್ಲೇದಾರನ ಸಂಗಡ ಜಗಳಮಾಡಿ ಅಬ್ದುಲ್‌ಮಜೀದಖಾನ ದಿಲಾವರ್ ಜಂಗಬಹಾದ್ದೂರನೆಂಬ ಸವಣೂರ ನವಾಬನ ಸಹಾಯದಿಂದ ಜೊಮ್ಮಾ ಪುರದ ಸೀಮೆಯಲ್ಲಿ ಒಂದು ಪೇಟೆಯನ್ನು ಕಟ್ಟಿಸಿದನು. ಅದರಲ್ಲಿ ಮಜೀ ದಪುರಯೆಂಬದೊಂದು ಓಣಿಯನ್ನು ಸವಣೂರ ನವಾಬನು ಸ್ವಂತ ವೆಚ್ಚ ದಿಂದ ಕಟ್ಟಿಸಿದನು. ಬಸಪ್ಪನು ಸುಮಾರು ೨೫೦೦ ರೂಪಾಯಿಗಳನ್ನು

ವೆಚ್ಚವಮಾಡಿ ಒಂದು ಕೋಟೆಯನ್ನು ಕಟ್ಟಿಸಿ ಅದಕ್ಕೆ ಹುಬ್ಬಳ್ಳಿಯೆಂದು ಹೆಸರಿಟ್ಟನು. ಮುಂದೆ ಕ್ರಿ. ಶ. ೧೭೬೪ರಲ್ಲಿ ೨೫ ಲಕ್ಷ ರೂಪಾಯಿಗಳ ಸರಂಜಾಮುದ ಉತ್ಪನ್ನವು ಪಟವರ್ಧನರಿಗೆ ಪೇಶ್ವೆಯರ ಕಡೆಯಿಂದ ದೊರಕಿತು. ಆದರಲ್ಲಿ ಈ ಕಿಲ್ಲೆ ಮತ್ತು ಹೊಸಹುಬ್ಬಳ್ಳಿ ಕೂಡಿದ್ದವು. ಮುಂದೆ ಕ್ರಿ. ಶ ೧೮೧೭ರಲ್ಲಿ ಪಟವರ್ಧನರಲ್ಲಿ ಪಾಲಾಗಿ ಹೊಸಹುಬ್ಬಳ್ಳಿಯು ಸಾಂಗಲೀ ಸಂಸ್ಥಾನಿಕರ ಕಡೆಗೆ ಬಂದಿತು. ಮತ್ತು ಹಳೇ ಹುಬ್ಬಳ್ಳಿಯು ಜನರಲ್ ಮನ್ರೋರವರ ಕಡೆಗೆ ಉಳಿಯಿತು. ಕ್ಯಾಪಟನ್ ಮೂರರವರು ಕ್ರಿ. ಶ. ೧೭೯೦ರಲ್ಲಿ ಹುಬ್ಬಳ್ಳಿಯು ಅತಿಶಯ ಊರ್ಜಿತಾವಸ್ಥೆಯಲ್ಲಿತ್ತೆಂದು ವರ್ಣಿಸಿರುವರು. ಕ್ರಿ. ಶ. ೧೭೯೨ರಲ್ಲಿ ಪರಶುರಾಮ ಭಾವು ಪಟವರ್ಧನನು ಹುಬ್ಬಳ್ಳಿಯ ಮೇಲೆ ದಂಡೆತ್ತಿ ಹೋದನು. ಆ ಕಾಲಕ್ಕೆ ಅಲ್ಲಿಯ ಜನರು ಆತನಿಗೆ ಬಹಳ ಹಣವನ್ನು ಕೊಟ್ಟು ಹುಬ್ಬಳ್ಳಿಯನ್ನು ಉಳಿಸಿಕೊಂಡರು. ಕ್ರಿ. ಶ. ೧೭೯೬ರಲ್ಲಿ ಕೊಲ್ಹಾಪುರದ ಶಿವಾಜಿಯು ಹುಬ್ಬಳ್ಳಿಯನ್ನು ಲೂಟಮಾಡಿ ಹಳೇ ಹುಬ್ಬಳ್ಳಿಯನ್ನು ಕಿತ್ತೂರ ದೇಸಾಯರ ವಶಕ್ಕೆ ಕೊಟ್ಟನು. ಮುಂದೆ ಕ್ರಿ. ಶ. ೧೮೦೪ರಲ್ಲಿ ಪೇಶ್ವೆಯವರು ಅದನ್ನು ತೆಗೆದುಕೊಂಡು ಫಡಕೆ ಮನೆತನಕ್ಕೆ ಕೊಟ್ಟರು. ಕ್ರಿ. ಶ. ೧೮೩೦ರಲ್ಲಿ ಶ್ರೀಮಂತ ಚಿಂತಾಮಣರಾವ ಅಪ್ಪಾಸಾಹೇಬ ಸಾಂಗಲೀಕರ ಈತನು ಲಷ್ಕರಿಯ ವೆಚ್ಚದ ಸಲುವಾಗಿ ಹೊಸಹುಬ್ಬಳ್ಳಿ ಮತ್ತು ಆದರ ಸುತ್ತಲಿನ ೪೭ ಹಳ್ಳಿಗಳ ಸುಮಾರು ೬೨೦೫೦ ರೂಪಾಯಿಗಳ ಉತ್ಪನ್ನವುಳ್ಳ ಭಾಗವನ್ನು ಇಂಗ್ಲಿಷ ಸರಕಾರಕ್ಕೆ ಕೊಟ್ಟನು. ಕ್ಯಾಪಟನ್ ಉಂಗೇಡ್ ಎಂಬವನು ಕ್ರಿ. ಶ. ೧೮೪೪ರಲ್ಲಿ ಹುಬ್ಬಳ್ಳಿಯೊಳಗೆ ೫೪೫೮ ಮನೆಗಳೂ ಮತ್ತು ೩೩೦೯೦ ಜನಸಂಖ್ಯೆಯೂ ಇತ್ತೆಂದು ಹೇಳಿರುವನು. ಇಮ್ಮಡಿ ಗುರುಸಿದ್ಧಸ್ವಾಮಿಗಳ ಶಾಪದಿಂದ ಹುಬ್ಬಳ್ಳಿಯ ಬಸಪ್ಪನೆಂಬ ಸೆಟ್ಟಿಯು ಮೇಲೆ ಹೇಳಿದಂತೆ ಹೊಸಹುಬ್ಬಳ್ಳಿಯನ್ನು ಕಟ್ಟುವಾಗ್ಗೆ ಒಂದು ಭವ್ಯವಾದ ಮಠವನ್ನು ಕಟ್ಟಿಸಿದನು. ತನ್ನ ಸ್ವಂತ ಮಗನಿಗೆ ಮಾಹೇಶ್ವರ ದೀಕ್ಷೆಯನ್ನು ಕೊಡಿಸಿ ಆ ಮಠಕ್ಕೆ ಚರಮೂರ್ತಿಯನ್ನಾಗಿ ನೇಮಿಸಿದನು. ಅದಕ್ಕೆ ವ್ಯಾಪಾರಸ್ಥರ ಕಡೆಯಿಂದ ಅನೇಕ ಉತ್ಪನ್ನದ ಬಾಬುಗಳನ್ನು ಕೊಡಿಸಿದನು. ಈ ಚರಮೂರ್ತಿಯು ಬಹಳೇ ಪ್ರಖ್ಯಾತನಾಗಿ ಅನೇಕ ಮಹತ್ಕೃತ್ಯಗಳನ್ನು ಮಾಡಿ ಹುಚ್ಚ ಗುರುಸಿದ್ಧೇಶ್ವರನೆಂದು ಪ್ರಸಿದ್ಧನಾಗಿ ಕಡೆಗೆ ಹುಬ್ಬಳ್ಳಿಯಲ್ಲಿ ಸಮಾಧಿಸ್ಥನಾದನು. ಹುಬ್ಬಳ್ಳಿಯ ಮೂರುಸಾವಿ

ರಮಠದಲ್ಲಿ ಅವನ ಗದ್ದುಗೆಯು ಕರ್ತೃಗದ್ದುಗೆಯೆಂದು ಈಗ್ಗೂ ಪ್ರಸಿದ್ಧವದೆ. ಈ ಮಠಕ್ಕೆ ಪ್ರತಿವರ್ಷ ಸುಮಾರು ೨೫೦೦೦ ರೂಪಾಯಿಗಳ ಉತ್ಪನ್ನವದೆ ಮುಂದೆ ಕ್ರಿ ಶ. ೧೫೨೦ರಲ್ಲಿ ಈ ಪಟ್ಟದೊಳಗಿನ ಗುರುಸಿದ್ಧಸ್ವಾಮಿಗಳೆಂಬವರು ಲೋಕಾಶ್ರಯದಿಂದ ಆ ಮಠವನ್ನು ವಿಸ್ತಾರಗೊಳಿಸಿ ಉತ್ಸಹಗಳನ್ನು ಆರಂಭಿಸಿದರು. ಶ್ರಾವಣಮಾಸದ ಕಡೆಯ ಸೋಮವಾರ ದಿವಸ ಮಠದಲ್ಲಿ ಪಾದಪೂಜೆಯೂ ಮತ್ತು ರಥೋತ್ಸವವೂ ಜರಗುವವು. ಈ ಪ್ರಕಾರ ಮಠದ ವೈಭವವು ಬೆಳೆಯುತ್ತ ನಡೆಯಿತು ಮುಂದೆ ಬರಬರುತ್ತ ಕ್ರಿ ಶ. ೧೮೫೦ರ ಸುಮಾರಿನಲ್ಲಿ ಈ ಮೂರುಸಾವಿರ ಮಠಕ್ಕೆ ಲೋಕಾಶ್ರಯದಿಂದ ಅಡ್ಡಪಲ್ಲಕ್ಕಿಯ ಮರ್ಯಾದೆಯು ದೊರಕಿತು. ಈ ವೈಭವಾತಿಶಯದಿಂದ ದೇಶದೊಳಗಿನ ಕುಮಾರ ಸಮಯದ ಯಾವತ್ತು ವಿರಕ್ತಮಠದವರು ಇದೇ ಮಠವನ್ನು ಮುಂದೆ ಮಾಡಿಕೊಂಡು ನಡೆಯ ಹತ್ತಿದರು. ಅಂದಿನಿಂದ ಇವರು ತಮ್ಮನ್ನು ಜಗದ್ಗುರುಗಳೆಂದು ಕರಕೊಳ್ಳ ಹತ್ತಿದರು ಈ ಪ್ರಕಾರ ಜಡೇ ಮಠಕ್ಕಿಂತಲೂ ಈ ಹೊಸ ಹುಬ್ಬಳ್ಳಿಯ ಮೂರುಸಾವಿರ ಮಠದ ಸ್ತೋಮವು ಹೆಚ್ಚಿಗೆ ಬೆಳೆಯಿತು. ಈ ರೀತಿ ಮುರಗೀ ಮತ್ತು ಕುಮಾರವೆಂಬ ಎರಡು ಸಮಯಗಳು ವಿರಕ್ತರೊಳಗೆ ಉಂಟಾದವು ಎಂಬು ಜನರು ಹೇಳುತ್ತಿರುವರು.

(೩) ಕಟ್ಟಿಗೆಹಳ್ಳಿದೇವನಿಗೆ ಶಾಂತವೀರದೇಶಿಕ (ಕ್ರಿ. ಶ. ೧೬೫೦) ಮತ್ತು ಚೆನ್ನನಂಜಿದೇವ ಎಂಬ ಇಬ್ಬರು ಶಿಷ್ಯರಿದ್ದರು. ಶಾಂತವೀರದೇಶಿಕನು ವಸ್ತ್ರಕ್ಕೆ ಮುರಿಗೆಯನ್ನು ಹಾಕಿ ಕೊರಳಲ್ಲಿ ಲಿಂಗವನ್ನು ಧರಿಸುವದರಿಂದ ಆತನಿಗೆ ಮುರಿಗೆಯೆಂತಲೂ ಮತ್ತು ಚೆನ್ನನಂಜಿದೇವನು ದುಡ್ಡು ಗಳಿಸುವದರಲ್ಲಿ ಮಹಾಚತುರನೂ ಹಾಗು ಧೂರ್ತನೂ ಇದ್ದದರಿಂದ ಆತನಿಗೆ ಸಂಪಾದನೆಯೆಂತಲೂ ಗುರುಗಳು ಕರೆಯುತ್ತಿದ್ದರು. ಮುಂದೆ ಜನರು ಇವೇ ಹೆಸರಿನಿಂದ ಆ ಉಭಯತರನ್ನು ಸಂಬೋಧಿಸಹತ್ತಿದರು. ಈ ಉಭಯ ಗುರುಬಂಧುಗಳು ಮೊದಲು ಬಹಳೇ ಸಖ್ಯತ್ವದಿಂದಿದ್ದು ಮುಂದೆ ಮನಸ್ತಾಪವುಂಟಾಗಿ ನಾವು ಮೇಲೆ ಹೇಳಿದಂತೆ ಮುರಿಗೆಯ ಶಾಂತವೀರ ದೇಶಿಕರು ಮೊದಕೇರಿಯ ನಾಯಕನ ಆಶ್ರಯದಿಂದ ದೇಶದಲ್ಲಿ ಸಮಾಜೋದ್ಧಾರಕ ಕೆಲಸಗಳನ್ನು ನಡಿಸಿದರು ಮತ್ತು ಇತ್ತ ಕಡೆಗೆ ಸಂಪಾದನೆಯ ಚೆನ್ನನಂಜಿದೇವನು ಕಾವೇರಿ ಮತ್ತು ಹೇಮಾವತಿ ನದಿಗಳ ನಡುವಿನ ಪ್ರಾಂತದಲ್ಲಿಯ ನಂದಿಯಪುರದಲ್ಲಿ ಆ ಪ್ರಾಂತದ ರಾಜ

ನಾದ ಬಿಜ್ಜಪುರವರಾಧೀಶ ತೋಂಟದ ಸಿದ್ಧಲಿಂಗಭೂಪಾಲನ ಆಶ್ರಯ ದಿಂದ ದೊಡ್ಡ ಘನತೆಗೇರಿ ಆ ಪ್ರಾಂತದಲ್ಲಿ ಅತಿ ಉತ್ಸುಕತೆಯಿಂದ ಸಮಾಜೋದ್ಧಾರಕ ಕೆಲಸಗಳನ್ನು ನಡೆಸಿದ್ದನು. ಹೀಗೆ ನಡೆದಿರಲು ಕ್ರಿ. ಶ. ೧೬೭೫ರ ಸುಮಾರಿನಲ್ಲಿ ಕಟ್ಟಿಗಿಹಳ್ಳಿ ಸ್ವಾಮಿಗಳು ತಿಳುವಳ್ಳಿಯಲ್ಲಿ ಸಮಾಧಿಸ್ಥರಾದ ಮೇಲೆ ಈ ಈರ್ವರಲ್ಲಿ ಮಠದ ಆಧಿಪತ್ಯವು ಯಾರಿಗಾಗಬೇಕೆಂಬುವದರ ಸಲುವಾಗಿ ಜಗಳವು ಉತ್ಪನ್ನವಾಯಿತು. ಈ ವ್ಯಾಜ್ಯವು ದೀರ್ಘಕ್ಕೆ ಹೋಗಿ ಇದರ ಸಲುವಾಗಿ ದೇಶದ ಮಧ್ಯದಲ್ಲಿ ಎರಡು ಪ್ರಬಲವಾದ ಪಂಗಡಗಳು ಉತ್ಪನ್ನವಾದವು. ಈ ಬಿಜ್ಜಪುರವರಾಧೀಶ ತೋಂಟದ ಸಿದ್ಧಲಿಂಗಭೂಪಾಲನ ಮಗನಾದ ಚಿಕ್ಕಣ್ಣಗೌಡನು ಮತ್ತು ಅವನ ಮಗನಾದ ಇಮ್ಮಡಿ ಚಿಕ್ಕಭೂಪಾಲನು ಬಹಳ ವಿದ್ಯಾಪಕ್ಷಪಾತಿಗಳಾಗಿದ್ದರು. ಇಮ್ಮಡಿ ಚಿಕ್ಕಭೂಪಾಲನಿಗೆ ಮದ್ಗಿರಿಯ ೨ನೆಯ ಶಿಲಾಶಾಸನದಲ್ಲಿ "ಒಂಕಣಿ ನಾರಾಯಣ. ಸಮರನಿಶಂಕ. ನೂತನ ಭೋಜರಾಜ, ತಲಾಘರಾಯರಾವುತ ವೇಶ್ಯಾಭುಜಂಗ ಮುಂತಾದ ಪದವಿಗಳು ಇದ್ದವು" ಎಂದು ಹೇಳಿದೆ ಈ ರಾಜನು ಕ್ರಿ. ಶ. ೧೫೯೩ರಲ್ಲಿ ಇದ್ದನು. ಇವನ ಆಶ್ರಯದಿಂದ ಈ ಸಂಪಾದನೆಯೊಳಗಿನ ಪರ್ವತೇಂದ್ರ, ವಿರಕ್ತ ತೋಂಟದಾರ್ಯ ಮುಂತಾದ ಗ್ರಂಥಕರ್ತರು ಬಹಳ ಪ್ರಸಿದ್ಧಿಯನ್ನು ಹೊಂದಿದರು. ಹೀಗೆ ಈ ಎರಡೂ ಸಮಯದೊಳಗಿನ ವೈಮನಸ್ಸು ಅತಿ ವಿಕೋಪಕ್ಕೆ ಹೋಗಿ ಉಭಯರ ನಡುವೆ ಪಂಕ್ತಿವ್ಯವಹಾರವು ಕಟ್ಟಾಯಿತು. ಇತ್ತ ತೋಂಟದ ಸಿದ್ಧಲಿಂಗನ ಪ್ರಶಿಷ್ಯನಾದ ಮುರಿಗೆಯ ಶಾಂತವೀರನಿಗೆ ಮಹಾಂತ ಹಾಗು ಕಂಪಿನಂಜಿದೇವರೆಂದು ಉಭಯ ಶಿಷ್ಯರಿದ್ದರು. ಇವರು ಕ್ರಿ. ಶ. ೧೬೬೦ರ ಸುಮಾರಿನಲ್ಲಿ ತಮ್ಮ ಗುರುವಾದ ಶಾಂತವೀರನ ಸ್ತುತಿಯನ್ನು ನಂದಿನಾಮಕ ಗ್ರಂಥದಲ್ಲಿ ಮಾಡಿರುವರು. ವಿದ್ಯಾಮದದಿಂದ ಇವರೊಳಗಿನ ಮನಸ್ತಾಪವು ಬೆಳೆದು ಇವರಲ್ಲಿ ಕಂಪಿನಂಜಿದೇವನು ಕಲ್ಯಾಣಕ್ಕೆ ಹೋಗಿ ಅಲ್ಲಿ ಹೊಸದಾಗಿ ಸ್ಥಾಪಿಸಲ್ಪಟ್ಟ ಶ್ರೀ ಪ್ರಭುದೇವರ ಮಠದಲ್ಲಿ ಇರಹತ್ತಿದನು. ಮತ್ತು ಮಹಾಂತಸ್ವಾಮಿಯು ನಾವು ಹಿಂದೆ ಹೇಳಿದಂತೆ ಚೀಲಾಳ ಸಮಯದ ಮುಖ್ಯಸ್ಥನಾಗಿ ಇರಹತ್ತಿದನು.

(೪) ಈ ಕಥೆಯು ಕ್ರಿ. ಶ. ೧೯೩೨ ಅಕ್ಟೋಬರ ಹಾಗು ಡಿಸೆಂಬರ ತಿಂಗಳ 'ಶಿವಾನುಭವದ' ೪ನೆಯ ಮತ್ತು ೫ನೆಯ ಸಂಚಿಕೆಯಲ್ಲಿ ನಿರಂಜನ ವಂಶರತ್ನಾಕರವೆಂದು ಪ್ರಸಿದ್ಧವಾಗಿದೆ. ಆದರೊಳಗಿನ ಸಾರಾಂಶವು—

ನೋಡಸಿದ್ಧಲಿಂಗಸ್ವಾಮಿ ಮತ್ತು ಮುರಘಾಸ್ವಾಮಿ ಹೀಗೆ ಈರ್ವರು ಎಲ್ಲ ಬಿರುದಾವಳಿಗಳೊಡನೆ ಸಂಚರಿಸುತ್ತ ದಿಲ್ಲಿಗೆ ಬಂದು ಅಲ್ಲಿಯ ಮುದಿಮಲ್ಲಪ್ಪನೆಂಬ ಒಬ್ಬ ಶಿವಭಕ್ತನ ಭಕ್ತಿಭಾವಕ್ಕೆ ಮೆಚ್ಚಿ ಇರುತ್ತಿರಲು ಅರಮನೆಯಲ್ಲಿ ಆನೆ ಸತ್ತದ್ದರ ಸುದ್ದಿಯನ್ನು ಕೇಳಿ ಉಭಯ ಶ್ರೀಗಳು ತಮ್ಮ ಪಾದೋದಕದಿಂದ ಅದನ್ನು ಜೀವಂತಗೊಳಿಸಿದ್ದರಿಂದ ಬಾದಶಹನು ಸಂತುಷ್ಟನಾಗಿ ಅವರಿಗೆ ಶಿಖಾಸೈಲಿ, ಶೂನ್ಯಪೀಠ, ಪ್ರಣವಸಿಕ್ಕೆ, ಶೈಲ, ಲಾಲಶಿಕ್ಕೆ ಹಸರುಜುಟ್ಟಿ, ಸದರಗುಂಡ ಮುಂತಾದವುಗಳನ್ನು ಕೊಡುವದಲ್ಲದೆ "ಜಂಗಮ ಜೀತಾಪೀರ" ವೆಂಬ ಬಿರುದನ್ನು ಕೊಟ್ಟು ಅವರನ್ನು ಗೌರವಿಸಿದನು. ಮುಂದೆ ಅವರು ಸಂಚರಿಸುತ್ತ ಹೈದರಾಬಾದಕ್ಕೆ ಬಂದು ನಿಜಾಮುಸರಕಾರದವರ ಸತ್ತ ಆನೆಯನ್ನು ಜೀವಂತಗೊಳಿಸಲು ಆ ಸರಕಾರದವರು ಇವರಿಗೆ ನಾಲ್ಕು ಶ್ವೇತ ಛತ್ರಗಳನ್ನೂ ಎರಡು ಪಲ್ಲಕ್ಕಿಗಳನ್ನೂ ಕೊಟ್ಟು ಮರ್ಯಾದೆಯಿಂದ ಕಳುಹಿಸಲಾಗಿ ಅವರು ಸ್ವಾದೀರಾಜ್ಯದೊಳಗಿನ ಇಸಳೂರ ಕಡೆಗೆ ಬಂದರು. ನೋಡಸಿದ್ಧಲಿಂಗದೇವರಿಗೆ ತಮ್ಮ ಅಂತ್ಯಕಾಲವು ಸಮಿಾಪಿಸಿತೆಂದು ಕಂಡು ಬಂದದರಿಂದ ಅವರು ಅಲ್ಲಿಯ ಸ್ವಾದಿಯ ರಾಜನನ್ನೂ ಮತ್ತು ಕೆಲವು ಪ್ರಮುಖ ಶಿವಭಕ್ತರನ್ನೂ ಕರೆಯಿಸಿ ಮುರಘಾಸ್ವಾಮಿಗಳ ಸಮ್ಮುಖದಲ್ಲಿ "ಶ್ರೀ ಅಲ್ಲಮಪ್ರಭು, ಚೆನಬಸವ ಮತ್ತು ಸಿದ್ಧರಾಮನನ್ನು ಹಿಡಿದು ನಮ್ಮ ವರೆಗೆ ೨೩ ಪಟ್ಟಗಳಾದವು. ನಮ್ಮ ಗುರುವಿನಾಜ್ಞೆಯಂತೆ ದಿಲ್ಲಿಯಲ್ಲಿ ಮುರಘಾಸ್ವಾಮಿಗಳಿಗೆ ಶಿಖಾಪಟ್ಟ ಕಟ್ಟಿದ್ದರಿಂದ ಕಟ್ಟಿಗೆಹಳ್ಳಿಯ ಸ್ವಾಮಿಗಳ ತರುವಾಯ ಮುರಘಾಸ್ವಾಮಿಗಳೂ ಮತ್ತು ನಾವೂ ದೇಶದೊಳಗಿನ ಮೂರುಸಾವಿರ ವಿರಕ್ತರಿಗೆ ಮತ್ತು ೭೦೦ ಬುಡಕಟ್ಟಿನ ಚರಮೂರ್ತಿಗಳಿಗೆ ಗುರುಗಳಾಗಿ ಅವರ ಕಡೆಯಿಂದ ವಂಡಖಂಡನಾದಿಗಳನ್ನು ತೆಗೆದುಕೊಳ್ಳುತ್ತ ಬಂದೆವು. ಈ ಪ್ರಕಾರ ನಾವು ೧೧ ಮತ್ತು ಮುರಘಾಸ್ವಾಮಿಗಳು ೯೦ ಜನರಿಗೆ ಚರಂತಿಕೆಯ ಅಧಿಕಾರವನ್ನು ಕೊಟ್ಟೆವು ಹಿಂದಕ್ಕೆ ತೋಂಟದಾರ್ಯರು ಕೊಟ್ಟ ೭೦೦ ಚರಂತಿಕೆಗೂ ಮತ್ತು ನಾವು ಉಭಯತರೂ ಕೂಡಿ ಕೊಟ್ಟಂಥ ೫೧ ಚರಂತಿಕೆಗೂ ಕೂಡಿ ಒಟ್ಟು ೭೫೧ ಚರಂತಿಕೆಗೆ ನಾವೇ ಗುರುಗಳಾಗಿರುವೆವು. ನಮ್ಮಲ್ಲಿ ಶಿಖಾಪಟ್ಟ ಮತ್ತು ಶಿವಾನುಭವಚರಂತಿಪಟ್ಟ ಹೀಗೆ ಭೇದವು ಇದ್ದರೂ ಏನೂ ತೊಂದರೆ ಇಲ್ಲದೆ ಈವರೆಗೂ ಅನುಭವ ಮಾಡುತ್ತ ಬಂದೆವು. ಇನ್ನು ಮುಂದೆ ನಮ್ಮ ತರುವಾಯ ಎಲ್ಲ ಭಾರವೂ ಮುರಘಾರಾಜೇಂದ್ರಸ್ವಾಮಿಗಳ ಮೇಲೆ ಇರುವದು" ಎಂದು ಹೇಳಿದ ಕೂಡಲೆ

ಮುರಘಾರಾಜೇಂದ್ರಸ್ವಾಮಿಗಳು "ತಮ್ಮ ಶಿವಾನುಭವ ಚರಂತಿಕೆಯ ಪಟ್ಟವನ್ನು ನಮ್ಮ ಸ್ವಾಧೀನದಲ್ಲಿ ಕೊಟ್ಟದ್ದಾದರೆ ಅದರಂತೆ ನಾವು ಮುಂದೆ ನಡೆಸುವೆವು" ಎಂದು ಸ್ವಾದೀರಾಜನ ಮತ್ತು ಬೇರೆ ಜನರ ಸಮಕ್ಷಮ ಹೇಳಿದರು.

ಶಕೆ ೧೮೫೭ರಲ್ಲಿ ಪ್ರಕಟವಾದ "ಸದ್ಧರ್ಮದೀಪಿಕೆ" ಸಂಚಿಕೆ ೨೯-೩೦-೩೧-೩೨ರಲ್ಲಿ ನಿರಂಜನವಂಶರತ್ನಾಕರದ ೨ನೆಯ ಭಾಗದ ಕೆಲವು ಅಂಶವು ಪ್ರಸಿದ್ಧವಾಗಿದೆ. ಅದರ ಸಾರಾಂಶವು :—

(೫) ಪ್ರಭುಸ್ವಾಮಿಗಳು ಬಯಲಾದ ಬಳಿಕ ಅವರ ತರುವಾಯ, ಚೆನ್ನಬಸವೇಶ್ವರನು ಕರ್ತನಾಗಿ ಇರುವಲ್ಲಿ ಹರಳಯ್ಯ ಮಧುವಯ್ಯಗಳ ಬೀಗತನದಿಂದ ಬಿಜ್ಜಳನು ಸಿಟ್ಟಾಗಿ ಈರ್ವರನ್ನು ಎಳಹೂಟೆಯಿಂದ ಎಳಸುವದನ್ನು ಜಗದೇವ ಮಲ್ಲಿಬೊಮ್ಮಯ್ಯಗಳು ಕಂಡು ಬಿಜ್ಜಳನನ್ನು ಕೊಂದರು. ಆ ಸಮಯದಲ್ಲಿ ಚೆನ್ನಬಸವನು ಕೆಲವು ಪ್ರಮಥರೊಡನೆ ಉಳುವಿಗೆ ಚಿತ್ತೈಸಿದನು. ಹೊರಡುವಾಗ್ಗೆ ಶಿಖಾ. ಶೈಲ, ಶೂನ್ಯಪೀಠಗಳನ್ನು ಮಲ್ಲೂಖಾನನಿಗೆ ಕೊಟ್ಟು "ಮುಂದೆ ನೀನು ದಿಲ್ಲೀ ಅರಸನಾಗುವಿ. ಅಗ್ಯೆ ನಮ್ಮ ವಂಶಿಕರು ದಿಲ್ಲಿಗೆ ಬಂದು ಮೃತವಾದ ನಿನ್ನ ಪಟ್ಟದಾನೆಯನ್ನು ಎಬ್ಬಿಸುವರು. ಅವರಿಗೆ ಇವುಗಳನ್ನು ಕೊಡು" ಎಂದು ಹೇಳಿದನು. ಮತ್ತು ತಮ್ಮ ಶಿವಾನುಭವ ಚರಂತಿಕೆ ಪುಸ್ತಕವನ್ನು ಸಿದ್ಧರಾಮನಿಗೆ ಕೊಟ್ಟನು. ( ಈ ಚರಂತಿಕೆ ಪುಸ್ತಕವನ್ನು ಮಲ್ಲೂಖಾನನ ವಶಕ್ಕೆ ಆಗಲೀ ಅಥವಾ ಶಿಖಾ, ಶೈಲ, ಶೂನ್ಯಪೀಠಗಳನ್ನು ಸಿದ್ಧರಾಮನ ವಶಕ್ಕೆಯಾಗಲೀ ಯಾಕೆ ಕೊಡಲಿಲ್ಲವೋ ತಿಳಿಯದು.) ಈ ಸಿದ್ಧರಾಮನನ್ನು ಹಿಡಿದು ಕಟ್ಟಿಗೆಹಳ್ಳಿದೇವನವರೆಗೆ ಶಿಖಾ, ಶೈಲ ಇಲ್ಲದೇ ಶಿವಾನುಭವ ಚರಂತಿಕೆ ಪಟ್ಟಗಳು ಆದವು. ಇವರ ತರುವಾಯ ಶಿವಾನುಭವಚರಂತಿಕೆ ಪಟ್ಟವೆಂತಲೂ ಶಿಖಾಪಟ್ಟವೆಂತಲೂ ಎರಡು ತೆರವಾದವು ಈ ಕಟ್ಟಿಗೆಹಳ್ಳಿ ಸ್ವಾಮಿಗೆ ನೋಡಸಿದ್ಧಲಿಂಗ, ಇತನಿಗೆ ಕುಮಾರಸ್ವಾಮಿ ಎಂದು ಹೀಗೆ ಎರಡು ಶಿವಾನುಭವಚರಂತಿಕೆ ಪಟ್ಟಗಳಾದವು ಮತ್ತು ಮುರಘಾಸ್ವಾಮಿಗೆ ಶಿಖಾಪಟ್ಟವಾಯಿತು. ಅಂದಿನಿಂದ ಎರಡೂ ಪಟ್ಟಕ್ಕೂ ಸಮಾನಮರ್ಯಾದೆ ದೊರಕಹತ್ತಿತು. ಮುರಿಗಿ ಹಾಗೂ ಕುಮಾರಸ್ವಾಮಿಗಳು ಚಿತ್ರಕಲ್ಲದುರ್ಗದ ಅರಸನಾದ ಬಿಚ್ಚುಗತ್ತಿ ಭರಮನಾಯಕನ ಸಹಾಯದಿಂದ

ಆ ಊರಲ್ಲಿ ಹಾಗೂ ಊರಹೊರಗೆ ಎರಡು ಭವ್ಯವಾದ ಮಠಗಳನ್ನು ಕಟ್ಟಿಸಿಕೊಂಡು ಸಖ್ಯತ್ವದಿಂದ ಇರುತ್ತಿದ್ದರು. ಮುಂದೆ ದಾಸೋಹದ ಖರ್ಚಿನ ಸಲುವಾಗಿ ಹಾರನಹಳ್ಳಿಗೆ ಭಿಕ್ಷದ ದೆಸೆಯಿಂದ ನೋಡಸಿದ್ಧಲಿಂಗಸ್ವಾಮಿ ಮತ್ತು ಮುರುಘಾಸ್ವಾಮಿಗಳು ದಯಮಾಡಿಸಿದಾಗ್ಗೆ ಸಮೀಪದಲ್ಲಿರುವ ಹಳೇಬೀಡಿಗೆ ದಯಮಾಡಿಸಲಿಲ್ಲ. ಯಾಕೆಂದರೆ-ಹಳೇಬೀಡದ ಅರಸಿನ ಕಲ್ಲುಮಠದ ಬಸವದೇವರ ಮಗ ಕಲ್ಯಾಣಿ ಎಂಬವನು ಮಾದಿಗರ ತಿಮ್ಮಿಯ ಸಂಗವನ್ನು ಮಾಡಿದ್ದನು. ಅದನ್ನು ಅಂದಲೆಯ ಪುಟ್ಟಯ್ಯನು ಕಂಡು ಆ ಮಾದಗಿತ್ತಿಯ ಮುಡಿಯನ್ನು ಹಾಗೂ ಕಲ್ಯಾಣಿಯ ಜುಟ್ಟನ್ನು ಕೊಯ್ದು ಎರಡನ್ನು ತನ್ನ ಬಲಪಾದಕ್ಕೆ ಕಟ್ಟಿಕೊಂಡು ಗುಲ್ಲಮಾಡುತ್ತ ಎಲ್ಲರಿಗೂ ತೋರಿಸುತ್ತ ಮುಪ್ಪಯ್ಯನೆಂಬ ಶಿವಭಕ್ತನಿಗೆ ಹೇಳಿದನು. ನರಸಪ್ಪಯ್ಯನೆಂಬ ಅಲ್ಲಿಯ ಪಾರುಪತ್ಯಗಾರನು ವಿಚಾರಿಸಿ ಅವರನ್ನು ಕಾಗದ ಪತ್ರಸಹವಾಗಿ ಬೇಲೂರಿನ ಅಧಿಕಾರಸ್ಥನಾದ ಸಿದ್ಧರಾಜನೆಂಬ ಗುರಿಕಾರನ ಕಡೆಗೆ ಕಳುಹಿಸಿದನು. ಇವನು ಕಲ್ಯಾಣಿಗೆ ೩೪೦ ವರಹಗಳನ್ನು ದಂಡ ಕಟ್ಟಿದನು. ಇದರಿಂದ ಅವನನ್ನು ಊರವರು ಬಹಿಷ್ಕರಿಸಿದರು. ಹಳೇಬೀಡ ವಿರಕ್ತ ಮಠದಲ್ಲಿ ಕಟ್ಟಿಗೆಹಳ್ಳಿಸ್ವಾಮಿಗಳು ೩ ತಿಂಗಳ ಇದ್ದು ಎಲ್ಲರನ್ನು ಚನ್ನಾಗಿ ವಿಚಾರಿಸಿ ಕಲ್ಯಾಣಿಯ ಹಾಗೂ ಅವನ ಮನೆತನದವರ ಮತ್ತು ಅವರ ಅಭಿಮಾನಿಗಳಾದ ಶೆಟ್ಟಿ, ಪಟ್ಟಣಶೆಟ್ಟಿ, ಗಣಾಚಾರಿ ಮುಂತಾದವರ ಬಳಿಕೆಯನ್ನು ಸೂರ್ಯಚಂದ್ರರಿರುವವರೆಗೆ ಮಾಡಬಾರದೆಂದು ಆ ಬಹಿಷ್ಕಾರವನ್ನು ಸ್ಥಿರಗೊಳಿಸಿದರು. ಆದರೆ ಈಚೆಗೆ ಕಲ್ಯಾಣಿಯು ಸತ್ತದ್ದರಿಂದ ಆತನ ಮಗನಾದ ಚೆನ್ನವೀರಯ್ಯನನ್ನು ಉಭಯ ಸ್ವಾಮಿಗಳು ಬಳಿಕೆಯಲ್ಲಿ ತಗೆದುಕೊಳ್ಳಬೇಕೆಂದು ಹಳೇಬೀಡದ ಹಿರೇಮಠದ ರುದ್ರಪ್ಪನವರು ಮೊದಲಾದವರು ಅರಿಕೆ ಮಾಡಿಕೊಂಡರು ಹಾಗೂ ೧೦೦೦ ವರಹಗಳನ್ನು ಕಾಣಿಕೆಯಾಗಿ ಕೊಡಲಿಕ್ಕೆ ಒಪ್ಪಿದರು. ಆದರೆ ಎಲ್ಲ ಕಾಗದಗಳನ್ನು ನೋಡಿ ಮುರುಘಾ ಮತ್ತು ಕುಮಾರಸ್ವಾಮಿಗಳು ಕಲ್ಯಾಣಿಯು ಕೆಟ್ಟನಂತರ ಚೆನ್ನವೀರಯ್ಯನು ಹುಟ್ಟಿರುವನೆಂದು ಸಿದ್ಧಗೊಳಿಸಿ ಹಿಂದಿನ ಬಹಿಷ್ಕಾರವನ್ನು ಸ್ಥಿರಮಾಡಿದರು. ಮುಂದೆ ಕುಮಾರಸ್ವಾಮಿಗಳು ದಾಸೋಹದ ದೆಸೆಯಿಂದ ಹೊರಗೆ ಹೋದಾಗ್ಗೆ ಮುರುಘಾಸ್ವಾಮಿಗಳು ತಮ್ಮ ಅಂತ್ಯಕಾಲವು ಸಮೀಪಿಸಿತೆಂದು ದುರ್ಗದ ದೊರೆಯಾದ ಭರಮನಾಯಕ ಮೊದಲಾದವರನ್ನು ಕರೆಯಿಸಿಕೊಂಡು ಅವರ ಸಮಕ್ಷಮ ರುದ್ರಪ್ಪನೆಂಬವನಿಗೆ ಇಮ್ಮಡಿ ಗುರುಸಿದ್ಧಸ್ವಾಮಿಗಳೆಂದು ಹೆಸರಿಟ್ಟು ತಮ್ಮ ಶಿಖಾ

ಪಟ್ಟವನ್ನು ಕಟ್ಟಿದರು. ಮತ್ತು ಕುಮಾರಸ್ವಾಮಿಗಳ ಕೂಡ ಭೇದವಿಲ್ಲದೆ ನಮ್ಮಂತೆ ನೀನು ನಡೆಯಬೇಕೆಂದು ವಚನ ತೆಗೆದುಕೊಂಡರು ಈ ವರ್ತಮಾನವನ್ನು ಇಮ್ಮಡಿ ಗುರುಸಿದ್ಧಸ್ವಾಮಿಗಳು ಇಸಳೂರಲ್ಲಿರುವ ಕುಮಾರಸ್ವಾಮಿಗಳಿಗೆ ತಿಳಿಸಿದರು. ಇದನ್ನು ಕೇಳಿ ಮುರಘಾಸ್ವಾಮಿಗಳು ನಮ್ಮನ್ನು ಕರೆಸದೇ ಹಳೇಬೀಡ ಕಲ್ಲುಮಠದ ಸಂಬಂಧವುಳ್ಳ ರುದ್ರಪ್ಪನಿಗೆ ಶಿಖಾಪಟ್ಟವನ್ನು ಮಾಡಿದ ಮೇಲೆ ಮುಂದೆ ಹಳೇಬೀಡು ಕಲ್ಲುಮಠದ ಚಿನ್ನವೀರಯ್ಯನ ಬಳಿಕೆ ಅವರು ಮಾಡುವದು ನಿಜ, ಮತ್ತು ನಮ್ಮ ಆಚರಣೆಗೆ ಕೊರತೆ ಬರುವದೇ ನಿಜ, ಇನ್ನು ಮುಂದೆ ನಾವು ಈ ಮರ್ತ್ಯಲೋಕದಲ್ಲಿ ಇರಬಾರದೆಂದು ಬಗೆದು ಸೋದೆಯ ಅರಸನಾದ ಸದಾಶಿವರಾಜ ಮುಂತಾದವರನ್ನು ಕರೆಯಿಸಿಕೊಂಡು ಅವರ ಸಮಕ್ಷಮ ಸಿದ್ಧರಾಮಪ್ಪನೆಂಬವನಿಗೆ ಕೆಂಪಿನ ಸಿದ್ಧಬಸವಸ್ವಾಮಿಗಳೆಂದು ಹೆಸರಿಟ್ಟು ಶಿವಾನುಭವಚರಂತಿಗೆಪಟ್ಟವನ್ನು ಮಾಡಿ ಅವರ ಕಡೆಯಿಂದ ದುರ್ಗದ ಸ್ವಾಮಿಗಳ ಕೂಡ ಬಳಿಕೆ ಮಾಡಬಾರದೆಂದು ವಚನ ತೆಗೆದುಕೊಂಡು ಇಸಳೂರಲ್ಲಿ ಬಯಲಾದರು. ಈ ಸುದ್ಧಿಯು ದುರ್ಗಕ್ಕೆ ಮುಟ್ಟಿತು. ಮುಂದೆ ಇಮ್ಮಡಿ ಗುರುಸಿದ್ಧಸ್ವಾಮಿಗಳು ಹಳೇಬೀಡು ಹಿರೇಮಠದ ರುದ್ರದೇವ ಮುಂತಾದವರ ಬಿನ್ನಹದ ಮೇರೆಗೆ ಹಳೇಬೀಡು ಕಲ್ಲುಮಠದ ಚಿನ್ನವೀರಯ್ಯನ ಕಡೆಯಿಂದ ೫೦೦ ವರಹ ಕಾಣಿಕೆ ತೆಗೆದುಕೊಂಡು ಸ್ವಾಮಿಗಳು ಅವನ ಸಂಬಂಧಿಕರಾದ್ದರಿಂದ ಅವನನ್ನು ಶಾಲಿವಾಹನ ಶಕೆ ೧೬೪೦ ಚೈತ್ರ ಶು. ಬಿದಿಗೆಯ ದಿವಸ ಶಿವಾಚಾರ ಬಳಿಕೆಯಲ್ಲಿ ತೆಗೆದುಕೊಂಡು ದೇಶಕ್ಕೆ ಶುದ್ಧಿಪತ್ರವನ್ನು ಕಳುಹಿಸಿದರು. ಅದನ್ನು ಯಾರೂ ಒಪ್ಪಲಿಲ್ಲ ಇದರಿಂದ ಎರಡು ಪ್ರಬಲವಾದ ಪಂಗಡಗಳಾದವು. ಮೊದಲಿನಂತೆ ಉಭಯಸ್ವಾಮಿಗಳನ್ನು ಕೂಡಿಸಬೇಕೆಂದು ಮಿರಕೇರಿ ಹಾಗು ಸ್ವಾದೀ ಅರಸರು ಮೊದಲಾದವರು ಬಹಳೇ ಪ್ರಯತ್ನ ಪಟ್ಟರು. ಇದನ್ನು ನೋಡಿ ದುರ್ಗದ ಸ್ವಾಮಿಗಳು ಇನ್ನು ಮುಂದೆ ಹಳೇಬೀಡದ ಬಳಿಕೆಯನ್ನು ಬಿಟ್ಟರೆ ನಾವು ದುರ್ಗಕ್ಕೆ ಹೋಗುತ್ತೇವೆಂದು ಹೇಳಿ ಕೆಂಪಿನ ಸಿದ್ಧಬಸವಪ್ಪಸ್ವಾಮಿಗಳು ದುರ್ಗಕ್ಕೆ ಹೋದರು. ಅಲ್ಲಿ ಇಮ್ಮಡಿ ಗುರುಸಿದ್ಧಸ್ವಾಮಿಗಳು ತಮ್ಮ ಖಾಸ ಪಂಗತಿಗೆ ಬರಬೇಕೆಂದು ಕೆಂಪಿನ ಸಿದ್ಧಬಸವಸ್ವಾಮಿಗಳಿಗೆ ಬಿನ್ನಹ ಮಾಡಿಕೊಂಡರು. ಇದನ್ನು ತಿರಸ್ಕರಿಸಿ ಕೆಂಪಿನ ಸಿದ್ಧಬಸವಸ್ವಾಮಿಗಳು ತಿರುಗಿ

ಬಂದರು ಇದರಿಂದ ಬೇಗೆಯು ಮತ್ತಿಷ್ಟು ಹೆಚ್ಚಿ ಮುರಗಿ ಹಾಗು ಕುಮಾರವೆಂದು ಎರಡು ಪ್ರಬಲ ಸಮಯಭೇದಗಳಾದವು.

(೬) ಕೆಂಪಿನ ಬುಡಕಟ್ಟಿನ ಸಂಗನಬಸವಪ್ಪನವರು, ಸೋಮಕಟ್ಟಿ ಬುಡಕಟ್ಟಿನ ಚೆನ್ನಬಸಪ್ಪನವರು, ಗದ್ದಕಟ್ಟಿ ಬುಡಕಟ್ಟಿನ ಗುರುಬಸಪ್ಪನವರು, ಗೂಳಿಕೊಂಡಯ್ಯನವರ ಬುಡಕಟ್ಟಿನ ರುದ್ರಪ್ಪನವರು ಮತ್ತು ಆಯಕಟ್ಟಿನ ಬುಡಕಟ್ಟಿನ ಸಿದ್ಧಲಿಂಗಸ್ವಾಮಿಗಳು ಮಹಾನವಮಿಯ ಸಭೆಯಲ್ಲಿ ಮುರುಘಾ ಹಾಗೂ ಕುಮಾರಸ್ವಾಮಿಗಳು ಸಿಂಹಾಸನಾರೂಢರಾದದ್ದು ನೋಡಿ ಸೈರಿಸಲಾರದೆ ಮುರುಘಾಸ್ವಾಮಿಗಳು ಕುಮಾರಸ್ವಾಮಿಗಳನ್ನು ತಮ್ಮ ಸರಿಯಾಗಿ ಸಿಂಹಾಸನದ ಮೇಲೆ ಕೂಡ್ರಿಸಿಕೊಂಡು ಸಮ ಮರ್ಯಾದೆಯನ್ನು ಕೊಟ್ಟ ಬಳಿಕ ಅವರಂತೆ ನಮಗೇಕೆ ಸಮ ಮರ್ಯಾದೆಯನ್ನು ಕೊಡಬಾರದು? ಹಾಗೂ ಅವರು ನಮಗೇಕೆ ಸಾಷ್ಟಾಂಗ ಹಾಕಬಾರದು? ಎಂದು ಹಟಹಿಡಿದು ದುರುಕ್ತಿಗಳನ್ನು ಆಡಹತ್ತಿದರು. ಈ ಸಂಗತಿಯು ಉಭಯಸ್ವಾಮಿಗಳಿಗೆ ತಿಳಿದಕೂಡಲೆ ಅವರನ್ನು ಸಭೆಯಿಂದ ಹೊರಗೆ ಹಾಕಿಸಿದರು. ಮುಂದೆ ಬಿಚ್ಚುಗತ್ತಿಯ ಭರಮನಾಯಕನು ಇವರನ್ನು ಹದ್ದುಪಾರು ಮಾಡಿದನು. ಇವರಲ್ಲಿ ನಾ ಹೆಚ್ಚು ನೀ ಹೆಚ್ಚು ಎಂದು ಜಗಳುಂಟಾಗಿ ಕೆಂಪಿನ ಮುಂತಾದ ಸಮಯಭೇದಗಳಾದವು. ಇವರ ಮಠಗಳು ಕಲ್ಯಾಣ, ಬಗ್ಗಂಜೆ ಮುಂತಾದ ಸೀಮೆಗಳಲ್ಲಿ ಇರುವವು

(೭) ದಾಸೋಹದ ವೆಸೆಯಿಂದ ಹರಪನಹಳ್ಳಿ ಸೀಮೆಗೆ ದಯಮಾಡಿಸಿದ ಚೀಲಾಳ ಬುಡಕಟ್ಟಿನ ತೋಟಪ್ಪನವರು ದುರ್ಗಕ್ಕೆ ಬಂದು ಅಂದದ್ದು—ನಾವು ಯೋಗ್ಯ ಚರಮೂರ್ತಿಗಳಿರಲಿಕ್ಕೆ ಯಾವ ಆಧಾರದ ಮೇಲಿಂದ ಮುರುಘಾಸ್ವಾಮಿಗಳು ತಮ್ಮ ಶಿಖಾಪಟ್ಟವನ್ನು ನಮಗೆ ಮಾಡದೆ ಎರಡನೆಯವರಿಗೆ ಹೇಗೆ ಮಾಡಿದರು? ಎಂದು ಕೇಳಿದ್ದಕ್ಕೆ ಸಿಟ್ಟಿನಿಂದ ಮದಕೇರಿನಾಯಕನು ಅವರನ್ನು ಹದ್ದುಪಾರ ಮಾಡಿದನು. ಇವರು ಚೀಲಾಳ ಬುಡಕಟ್ಟಿನ ೧೦, ಬಳ್ಳಾರಿ ಬುಡಕಟ್ಟಿನ ೧೫, ಚಿತ್ರಗಿ ಬುಡಕಟ್ಟಿನ ೧೦, ಆದವಾನಿ ಬುಡಕಟ್ಟಿನ ೮, ಕಡಲೇಬರಹದ ಬುಡಕಟ್ಟಿನ ೫, ಕಾಡವಾಲಿ ಬುಡಕಟ್ಟಿನ ೨೫, ಗದಗ ಬುಡಕಟ್ಟಿನ ೧೫, ಹೀಗೆ ೮೮ ಚರಮೂರ್ತಿಗಳನ್ನು ಹರಪನಹಳ್ಳಿಗೆ ಕರಕೊಂಡು ಹೋಗಿ ಆ ಊರ ದೊರೆ

ಯನ್ನು ಭಕ್ತನನ್ನು ಮಾಡಿಕೊಂಡು ಅವನ ಆಶ್ರಯದಿಂದ ಅಲ್ಲಿ ಮಠ ವನ್ನು ಕಟ್ಟಿ ಅಲ್ಲಿಯೇ ನಿಂತರು. ಇವರ ಮಠಗಳು ಬಳ್ಳಾರಿ ಸೀಮೆಯಲ್ಲಿ ವಿಶೇಷವಾಗಿವೆ. ಹೀಗೆ ಚೀಲಾಳ ಸಮಯಭೇದವಾಯಿತು.

(೮) ಹಿಂದೆ ಕಟ್ಟಿಗೆಹಳ್ಳಿಸ್ವಾಮಿಗಳ ಕಾಲದಲ್ಲಿ ಸಂಪಾದನೆಯ ಬುಡ ಕಟ್ಟಿನ ಸಿದ್ಧವೀರಪ್ಪನವರಿಗೆ ಅಷ್ಟಾವರಣದಲ್ಲಿ ವಿಶ್ವಾಸವಿಲ್ಲದಕಾರಣ ಅವರ ಇಷ್ಟಲಿಂಗದ ಗೋಳಕ (ಬಾಣ) ಸಡಲಿತು. ಅದನ್ನು ಸ್ವಾಮಿಗ ಳಿಗೆ ಅರಿಕೆ ಮಾಡಲು ಕಂಥೆ ಬಲಿಸಿ ಲಿಂಗ ಧರಿಸಿಕೊ ಎಂದು ಅಪ್ಪಣೆ ಆಯಿತು ಆ ಪ್ರಕಾರ ಎರಡು ಮೂರಾವರ್ತಿ ಮಾಡಲು ನಿಲ್ಲದೇ ಹೋದ ದ್ದರಿಂದ ಇದನ್ನು ಸ್ವಾಮಿಗಳಿಗೆ ಪುನಃ ಅರಿಕೆ ಮಾಡಿಕೊಂಡರು. ಆ ಮೇಲೆ ಸ್ವಾಮಿಗಳು ಸಿದ್ಧವೀರಪ್ಪನ ಕೊರಳಿಗೆ ವಸ್ತ್ರವ ಹಾಕಿಸಿ ಮಠದಿಂದ ಹೊರಗೆ ಹಾಕಿದರು. ಇದರಿಂದ ಸಿದ್ಧವೀರಪ್ಪನು ಸಿಟ್ಟಾಗಿ ಮೈಸೂರ ಸೀಮೆಯಲ್ಲಿಯ ಕೆಲವು ಭಕ್ತರನ್ನು ಕೂಡಿಕೊಂಡು ಶಾಸ್ತ್ರದಿಂದ ತರ್ಕ ಮಾಡಲು ಇದರಲ್ಲಿ ಸ್ವಾಮಿಗಳು ಇವನನ್ನು ಗೆದ್ದರು. ಮೈಸೂರ ದೊರೆ ಗಳು ಇದಕ್ಕೆ ಮೆಚ್ಚಿ ಅವರಿಗೆ ಬಹಳ ಮರ್ಯಾದೆ ಮಾಡಿದರು ತಿರುಗಿ ಬಿದ್ದವರಲ್ಲಿ ಅಪರಾಧ ಕಾಣಿಕೆಯನ್ನು ಒಪ್ಪಿಸಿ ಶರಣಾಗತರಾದವರು ಲಿಂಗ ವಂತರಾಗಿ ಉಳಿದರು. ಉಳಿದವರು ಭವಿಗಳಾದರು. ಈ ಸಿದ್ಧವೀರಪ್ಪನ ವರು ಹಗಲವಾಡಿಯ ದೊರೆಯನ್ನು ಭಕ್ತನನ್ನು ಮಾಡಿಕೊಂಡು ಅವನ ಸೀಮೆಯಲ್ಲಿ ಮಠಗಳನ್ನು ಕಟ್ಟಿಸಿಕೊಂಡು ನಿಂತರು. ಹೀಗೆ ಮೊದಲೇ ಸಂಪಾದನೆಯ ಸಮಯವಾಯಿತು. ಅಂತೂ ೫ ಸಮಯಗಳಾದವು.

ಇವುಗಳಲ್ಲಿ ಸಂಪಾದನೆಯ ಸಮಯವು ಜಗಳದಿಂದಾದ ಮೊದಲನೇ ಸಮಯವೆಂದು ಹೇಳುವರು. ಆದರೆ ಈ ಸಂಪಾದನೆಯ ಸಮಯದ ಮುಖ್ಯ ಮಠವು ಸದ್ಯಕ್ಕೆ ಒಂಟಮೂರಿಯಲ್ಲಿ ಇರುವದು. ಈ ಒಂಟಮೂ ರಿಗ್ರಾಮವು ಕ್ರಿ. ಶ. ೧೬೮೫ ಸುಮಾರಿನಲ್ಲಿ ಸ್ಥಾಪಿತವಾಗಿದೆ ಎಂದು ನಾವು ಎರಡನೆಯ ಪ್ರಕರಣದಲ್ಲಿ ಹೇಳಿರುವೆವು. ಅಂದ ಮೇಲೆ ಸಂಪಾದ ನೆಯ ಸಮಯದ ಉತ್ಪಾದಕರಾದ ಕಟ್ಟಿಗೆಹಳ್ಳಿದೇವರ ಶಿಷ್ಯರು ವಿರುಪಾ ಸ್ವಾಮಿಗಳು, ಇವರ ಶಿಷ್ಯರು ಇಮ್ಮಡಿ ಗುರುಸಿದ್ಧಸ್ವಾಮಿಗಳು, ಇವರ ಕಾಲವು ಸುಮಾರು ಕ್ರಿ. ಶ. ೧೭೩೦ ಆಗಬಹುದು. ಅಂದಮೇಲೆ ಈ ಇಮ್ಮಡಿ ಗುರುಸಿದ್ಧಸ್ವಾಮಿಗಳು ಶಾಲಿವಾಹನ ಶಕೆ ೧೫೪೦ ಕ್ರಿ. ಶ.

೧೬೯೮ರಲ್ಲಿ ಹಳೇಬೀಡದ ಕಲ್ಲುಮಠದ ಕಲ್ಯಾಣಿಯು ಮಗನಾದ ಚೆನ್ನವೀರ ಯ್ಯನನ್ನು ಶುದ್ಧಮಾಡಿದರೆಂದು ಕೊಟ್ಟ ಕಾಲವು ತಪ್ಪಾಗುವದು. ಮತ್ತು ಕಟ್ಟಿಗೆಹಳ್ಳಿಸ್ವಾಮಿಗಳು, ನೋಡಸಿದ್ಧಲಿಂಗಸ್ವಾಮಿಗಳು, ಮುರುಘಾಸ್ವಾ ಮಿಗಳು ಹಾಗು ಕುಮಾರಸ್ವಾಮಿಗಳು ಹೀಗೆ ಎಲ್ಲರೂ ಬೇರೆ ಬೇರೆ ಕಾಲ ಗಳಲ್ಲಿ ಎರಡು ಸಾರೆ ಹಳೇಬೀಡ ವಿರಕ್ತಮಠದಲ್ಲಿ ಕೆಲವು ಕಾಲ ನಿಂತು ಹಳೇಬೀಡದ ಕಲ್ಲುಮಠಕ್ಕೆ ಬಹಿಷ್ಕಾರ ಕೊಟ್ಟರೆಂದು ಹೇಳಿದೆ. ಈ ಹಳೇ ಬೀಡ ವಿರಕ್ತಮಠವು ಯಾವ ಬುಡಕಟ್ಟಿಗೂ ಸೇರಿದಂತೆ ಕಂಡುಬರುವದಿಲ್ಲ. ಅಂದಮೇಲೆ ಕಟ್ಟಿಗೆಹಳ್ಳಿದೇವನ ಕಾಲಕ್ಕೆ ದುರ್ಗದ ಹತ್ತಿರ ಹಳೇಬೀಡ ದಲ್ಲಿ ಯಾವ ಬುಡಕಟ್ಟಿಗೂ ಸೇರದ ಮತ್ತು ಸಮಯಭೇದದ ಉತ್ಪತ್ತಿ ಗಿಂತಲೂ ಮೊದಲಿನ ಒಂದು ಸ್ವತಂತ್ರವಾದ ವಿರಕ್ತಮಠವು ಇತ್ತೆಂಬದು ಸಹಜ ಸಿದ್ಧವಾಗುವದು. ಮತ್ತು ಶಾಸ್ತ್ರವಿರುದ್ಧವಾಗಿ ಹಳೇಬೀಡದ ಕಲ್ಲುಮಠದ ಕಲ್ಯಾಣಿಗೆ ಜುಟ್ಟುವಿತ್ತೆಂದು ಹೇಳಿದೆ. ಸದ್ಧರ್ಮದೀಪಿಕೆಯ ೩೧-೩೨ನೆಯ ಸಂಚಿಕೆಗಳಲ್ಲಿ ಹೇಳಿರುವದೇನಂದರೆ—ಇಸಳೂರಿನ ಕುಮಾರ ಸಮಯದ ಮಠವನ್ನು ದುರ್ಗದ ಸ್ವಾಮಿಗಳು ಬಲಾತ್ಕಾರದಿಂದ ವಶಮಾ ಡಿಕೊಂಡು ಸ್ವಾದಿಯ ರಾಜನನ್ನು ಭಕ್ತನನ್ನು ಮಾಡಿಕೊಂಡದ್ದರಿಂದ ಸಿಟ್ಟಿಗೆದ್ದು ಕುಮಾರಸಮಯದ ೧೪ ಜನ ಪುಂಡ ಜಂಗಮರು ಕಾಟಿಕರ ಸಹಾಯದಿಂದ ಬಸುರಿದ್ದ ಹೆಂಗಸನ್ನೂ ಪಡಕೊಂಡ ಒಬ್ಬ ಚರಮೂರ್ತಿ ಯನ್ನೂ ಕೊಂದು ಸ್ತ್ರೀ, ಶಿಶು, ಜಂಗಮ, ತೀರ್ಥ ಮತ್ತು ಪ್ರಸಾದಹತ್ಯೆ ವೆಂಬ ಪಂಚದ್ರೋಹನ್ನು ಮಾಡಿದರು. ಇದನ್ನು ಕೆಂಪಿನ ಸಿದ್ಧಬಸವ ಸ್ವಾಮಿಗಳು ಮಾಡಿಸಿದರೆಂದು ಆರೋಪ ಬರಲು ಇದರ ವಿಚಾರವನ್ನು ಜಡೇಗ್ರಾಮದ ಠಾಣೇದ ಗುರುಲಿಂಗಯ್ಯ ಮೊದಲಾದವರು ಮಾಡಿ ಸಿದ್ಧ ಬಸವಸ್ವಾಮಿಗಳು ನಿರ್ದೋಷಿಗಳೆಂದು ನಿರ್ಣಯಿಸಿದರು. ಆದರೂ ಎರಡೂ ಸಮಯದವರು ಒಬ್ಬರ ಮೇಲೊಬ್ಬರು ದೋಷವನ್ನು ಹೊರಿಸಿದ್ದರಿಂದ ಅವರ ನಡುವಿನ ಭೇದವು ದೃಢವಾಗುತ್ತ ಹೋಯಿತು.

ಈ ಮೇಲಿನ ಎಲ್ಲ ಮಾತುಗಳ ಮೇಲಿಂದಲೂ ಹಾಗು ಎಲ್ಲ ವಂಶಾವ ಳಿಗಳ ಮೇಲಿಂದಲೂ ನೋಡಲಾಗಿ ಕೆಳಗೆ ಬರೆದದ್ದರ ಸತ್ಯತೆಯು ವಾಚಕ ರಿಗೆ ವ್ಯಕ್ತವಾಗುವದು. ಪೂರ್ವದಲ್ಲಿ ಹರದನಹಳ್ಳಿ ಗೋಸಲಚೆನ್ನಬಸ ವೇಶ್ವರನಿಗೆ ತೋಂಟದ ಸಿದ್ಧಲಿಂಗನೆಂಬ ಒಬ್ಬ ಶಿಷ್ಯನಿದ್ದನು (ಕ. ಕ. ಚ., ಸಂಪುಟ ೬, ಪುಟ ೯೭). ಈ ತೋಂಟದಾರ್ಯನಿಗೆ ಅನೇಕ ಶಿಷ್ಯರಿ

ದ್ದರು ( ಕ. ಕ. ಚ., ಸ. ಪುಟ ೯೮-೯೯ ). ಕ್ರಿ. ಶ. ೧೫೦೦ರಲ್ಲಿಯ ಎಡೆ ಯೂರೊಳಗಿನ ಶಿಲಾಶಾಸನದಲ್ಲಿ ಮತ್ತು ಕ್ರಿ. ಶ. ೧೫೮೪ರಲ್ಲಿಯ ಚೆನ್ನಬಸವ ಪುರಾಣದಲ್ಲಿ ಹಾಗು ಕ್ರಿ. ಶ. ೧೫೬೦ರಲ್ಲಿಯ ಸಿದ್ಧೇಶ್ವರ ಪುರಾಣದಲ್ಲಿ ಹೇಳಿರುವ ಅನೇಕ ಶಿಷ್ಯರಲ್ಲಿ ನಿಜಬೋಳಬಸವ ಉರ್ಫ ಶಿವಪೂಜಾರ್ಯ ಎಂಬೊಬ್ಬ ಶಿಷ್ಯನಿದ್ದನು ಈ ನಿಜಬೋಳಬಸವನಿಗೆ ಗಗನದಯ್ಯ, ಚೆನ್ನ ನಂಜಿದೇವ, ಚೆನ್ನಾಚಾರ್ಯ, ಮತ್ತು ಗೂಳೂರ ಸಿದ್ಧಲಿಂಗ ಎಂಬ ಅನೇಕ ಶಿಷ್ಯರಿದ್ದರು. ಇವರಲ್ಲಿ ಗಗನದಯ್ಯನಿಗೆ ಕಟ್ಟಿಗೆಹಳ್ಳಿದೇವನೆಂಬೊಬ್ಬ ಶಿಷ್ಯನಿದ್ದನು. ಈ ಕಟ್ಟಿಗೆಹಳ್ಳಿದೇವನು ಕ್ರಿ. ಶ. ೧೬೭೫ರ ಸುಮಾರಿನಲ್ಲಿ ತಿಳುವಳ್ಳಿಯೊಳಗೆ ಸಮಾಧಿಸ್ಥನಾದನು. ಈ ಕಟ್ಟಿಗೆಹಳ್ಳಿದೇವನಿಗೆ ಅನೇಕ ಶಿಷ್ಯರಿದ್ದರು. ಇವರಲ್ಲಿ ಮುರಗಿ, ಸಂಪಾದನೆ, ಕುಮಾರ, ಚೀಲಾಳ ಮತ್ತು ಕೆಂಪಿನ ಎಂದು ಸಮಯಭೇದಗಳು ಪ್ರಾರಂಭವಾದವು. ತಾರೀಖು ೩-೭-೧೬೮೩ ಇಸವಿ ದಿವಸ ತೇರದಾಳದಲ್ಲಿ ಹೊಸದಾಗಿ ಸ್ಥಾಪಿಸಿದ ವಿರಕ್ತಮಠಕ್ಕೆ ೧ ಪಾವು ಭೂಮಿಯನ್ನು ಇನಾಮವಾಗಿ ಕೊಟ್ಟಂತೆ ಸನದು ಅದೆ. ಆ ಸನದಿನಲ್ಲಿ ಹೊಸ ವಿರಕ್ತಮಠವನ್ನು ಸ್ಥಾಪಿಸಿದೆ ಎಂಬದಿಷ್ಟೇ ಅದೆ. ಆದರೆ ಸದ್ಯಕ್ಕೆ ಈ ತೇರದಾಳದ ವಿರಕ್ತ ಮಠವು ಮುರಗಿ ಸಮಯಕ್ಕೆ ಒಳಪಟ್ಟಿದೆ. ಇದರ ಮೇಲಿಂದ ಕ್ರಿ. ಶ. ೧೬೮೪ರ ಈಚೆಗೆ ಈ ಸಮಯಭೇದವು ಆದದ್ದು ಸಿದ್ಧವಾಗುತ್ತದೆ. ಈ ಕಟ್ಟಿಗೆಹಳ್ಳಿದೇವನ ಹಿಂದಿನ ವಿರಕ್ತಮೂರ್ತಿಗಳು ಅನೇಕ ಸ್ಥಾನಗಳಲ್ಲಿ ಅನೇಕ ಮಠಗಳನ್ನು ಸ್ಥಾಪಿಸಿ ಅವುಗಳ ವ್ಯವಸ್ಥೆಗಾಗಿ ಅನೇಕ ಚರಮೂರ್ತಿಗಳನ್ನು ನಿಯಮಿಸಿದ್ದರು. ಈ ಎಲ್ಲ ವಿರಕ್ತಮೂರ್ತಿಗಳು ಅಶಾಸ್ತ್ರೀಯವಾದ ಸಮಯಭೇದಗಳು ಪ್ರಾರಂಭವಾದ ಕೂಡಲೆ ತಿಳಿದೂ ತಿಳಿದೂ ತಮ್ಮ ಮನ ಬಲ್ಲಂತೆ ಬೇಕಾದ ಪಂಗಡಕ್ಕೆ ಸೇರಿಕೊಂಡರು ಸದ್ಯಕ್ಕೆ ಚುನಾವಣಿಯ ಕಾಲದಲ್ಲಿ ಒಬ್ಬ ತರುಣ ಮತ್ತು ಉತ್ಸಾಹಿ ಪುರುಷನನ್ನು ಮುಂದೆ ಮಾಡಿ ಅವನಿಗಿಂತಲೂ ಎಷ್ಟೋ ವಯೋವೃದ್ಧರಾದ ಹಳೇ ಜನರು ಪಂಥಗಟ್ಟಿ ಮನಃಪೂರ್ವಕವಾಗಿ ಕೆಲಸ ಮಾಡುವರು. ಅದರಂತೆ ಈ ಸಮಯಭೇದಕ್ಕೆ ದೇಶದೊಳಗಿನ ಎಲ್ಲ ವಿರಕ್ತಮೂರ್ತಿಗಳು ಬೆಂಬಲವನ್ನಿತ್ತರು. ಇವರಲ್ಲಿ ಕೆಲವರು ಮುಂದೆ ಬಿದ್ದವರು ಶ್ರೇಷ್ಠರಾಗಿ ಹಿಂದೆ ಉಳಿದವರು ದುಡ್ಡಿನ ಹಾಗು ವಿದ್ಯೆಯ ಅಭಾವದಿಂದ ಹಿಂದೆ ಬಿದ್ದು ಅನಿವಾರ್ಯಹದ ಪಕ್ಷಕ್ಕೆ ಅವರ ವರ್ಚಸ್ಸಿಗೆ ಮಣಿದು ನಡೆಯುವ ಭಾಗಬಿತ್ತು. ಒಟ್ಟಿನ ಮೇಲೆ ಕ್ರಿ. ಶ. ೧೬೭೫ರಿಂದ ಕ್ರಿ. ಶ. ೧೭೫೦ರ ವರೆಗೆ ವಿರಕ್ತಮೂರ್ತಿಗಳಿಂದ ಸಮಾಜದಲ್ಲಿ

ಅಲ್ಲೋಲಕಲ್ಲೋಲವುಂಟಾಯಿತು. ಈ ಅವಧಿಯಲ್ಲಿ ನಿರಂಜನ ಮೂರ್ತಿ ಗಳಲ್ಲಿ ಸ್ಪರ್ಧೆಯಿಂದ ಅನೇಕ ಗ್ರಂಥಕಾರರು ನಿರ್ಮಾಣರಾದರು. ಈ ಸಮಯಭೇದದ ಬೇರುಗಳು ಬಹಳೇ ದೂರ ಹೋದದ್ದರಿಂದ ಅವುಗಳ ಕಟು ತರವಾದ ಫಲಗಳನ್ನು ವೀರಶೈವ ಸಮಾಜವು ಕ್ರಿ. ಶ. ೧೬೭೫ರಿಂದ ಇಂದಿ ನವರೆಗೆ ಅನುಭವಿಸಬೇಕಾಗಿದೆ. ಪೂರ್ವದಲ್ಲಿ ಒಂದರಲ್ಲಿ ಎರಡು, ಆ ಮೇಲೆ ಮೂರು ನಾಲ್ಕು ಹೀಗೆ ಐದು ಸಮಯ ಭೇದಗಳು ಉತ್ಪನ್ನವಾದವು ಈ ಸಮಯಭೇದಕ್ಕೆ ಈಗಿನಂತೆ ಲೋಕಾಶ್ರಯವು ದೊರೆಯುತ್ತ ಹೋದಲ್ಲಿ ಮುಂದೆ ತೀವ್ರವೇ ಐದರ ಬದಲಾಗಿ ಹತ್ತು ಸಮಯಭೇದಗಳಾಗುವ ಸಂಭವವದೆ. ಏಕೆಂದರೆ ಇದು ವಿಚಾರಸ್ವಾತಂತ್ರ್ಯದ ಯುಗವು. ಸದ್ಯಕ್ಕೆ ದೇಶದಲ್ಲಿ ಪ್ರತಿಯೊಂದು ಸಮಯದ ಸಾವಿರಾರು ಮಠಗಳಿರುವವು. ಕರ್ನಾಟಕದಲ್ಲಿ ಮೂರು ಅಥವಾ ನಾಲ್ಕು ಹರದಾರಿಗೊಂದಾದರೂ ಸಮ ಯಭೇದದ ವಿರಕ್ತಮಠವಿರುವದು. ಮತ್ತು ಯಾವದಾದರೊಂದು ದೊಡ್ಡ ಪಟ್ಟಣದಲ್ಲಿ ಈ ಐದೂ ಸಮಯಭೇದದ ವಿರಕ್ತಮಠಗಳಿರುವವು. ಇದ ರಿಂದ ನಾಲ್ಕೈದು ಹರದಾರಿಯೊಳಗಿನ ವೀರಶೈವರ ಇಲ್ಲವೆ ಒಂದು ದೊಡ್ಡ ಪಟ್ಟಣದೊಳಗಿನ ಎಲ್ಲ ವೀರಶೈವರ ಐಕ್ಯಮತವಾಗಲಿಕ್ಕೆ ಬಹಳೇ ಕಷ್ಟ ವಾಗಿರುವದು. ಏನೂ ಭೇದಭಾವವಿಲ್ಲದೆ ಎಲ್ಲ ಜಾತಿಯ ಹಾಗು ಸೂತ್ರದ ಜನರ ಕಡೆಯಿಂದ ಪೂಜಿಸಲ್ಪಡುವದೆತ್ತ! ಹಾಗು ಈ ಪರಿಸ್ಥಿತಿ ಎತ್ತ!! ಇದರ ಕಡೆಗೆ ವಿರಕ್ತವರ್ಗದವರು ಚನ್ನಾಗಿ ಲಕ್ಷ ಕೊಡತಕ್ಕದ್ದು. ಇಂಥ ಪರಿಸ್ಥಿತಿಯಲ್ಲಿ ಯಾವನಾದರೊಬ್ಬನು ಸಮಾಜದ ಕಳಕಳಿಯಿಂದ ಸಮಾ ಜೋದ್ಧಾರ ಕೆಲಸವನ್ನು ಕೈಕೊಂಡರೆ ಅವನಿಗೆ ಕ್ಷಿಪ್ರದಲ್ಲಿ ಈ ಸಮಯ ಭೇದದ ಭಕ್ತಮಾಹೇಶ್ವರರ ಕಡೆಯಿಂದ ಪ್ರತಿಬಂಧವಾಗುವದು. ಈ ರೀತಿ ವೀರಶೈವ ಸಮಾಜವು ತೀರ ರಸಾತಲಕ್ಕೆ ಮುಟ್ಟಿರುವದು. ಮೊದಲೇ ಈ ವಿರಕ್ತ ವರ್ಗದವರಲ್ಲಿ ವಿದ್ವಾಂಸರು ಕಡಿಮೆ. ಅವರಲ್ಲಿ ಒಬ್ಬರ ಲ್ಲಿಯೂ ದಿಗ್ವಿಜಯ ಮಾಡುವ ಸಾಮರ್ಥ್ಯವಿಲ್ಲ. ಆದರೆ ಪ್ರತಿಯೊಬ್ಬನಲ್ಲಿ ದುರಭಿಮಾನವು ತುಂಬಿ ತುಳಕುತ್ತದೆ. ಇಂಥ ಸಮಯದಲ್ಲಿ ಸಮಾಜವು ಮುಂದೆ ಬರುವ ಬಗೆ ಹೇಗೆ? ಈ ಸುಸಂಧಿಯನ್ನು ಸಾಧಿಸಿಕೊಂಡು '' ಈರ್ವರ ಜಗಳದಲ್ಲಿ ಮೂರನೆಯವನಿಗೆ ಲಾಭ" ಎಂಬ ನಾಣ್ಣುಡಿಯಂತೆ ಅನಾಯಾಸವಾಗಿ ಗುರುವರ್ಗದೊಳಗಿನ ಕೆಲವು ಜನರು ಅನ್ಯಾಯದಿಂ ದಲೂ ಮತ್ತು ಅಶಾಸ್ತ್ರೀಯ ರೀತಿಯಿಂದಲೂ ತಮ್ಮ ಹೆಜ್ಜೆಯನ್ನು

ಮುಂದೆ ಇಡಲು ಇಚ್ಛಿಸುತ್ತಿರುವರು. ಇದು ಒಳಿತಲ್ಲವು. ಆದರೆ ಮಾಡು
ವದೇನು? ನಿರಂಜನ ಮೂರ್ತಿಗಳೇ ತಮ್ಮೊಳಗಿನ ಅನೈಕ್ಯತೆಯಿಂದ ತಮ್ಮ
ಪಾದದ ಮೇಲೆ ತಾವೇ ಕಲ್ಲು ಚಲ್ಲಿಕೊಂಡ ನಾಣ್ಣುಡಿಗೆ ಸರಿಯಾಗಿ ವರ್ತಿ
ಸುತ್ತಿರುವರು. ಸದ್ಯಕ್ಕೆ ಇವರು ಗುರುವರ್ಗದವರಿಂದ ಇಷ್ಟು ಅಪಮಾನ
ಹೊಂದಿದರೂ ಕೂಡ ಎಚ್ಚರಾಗಲೊಲ್ಲರು! ಇದು ಸಮಾಜದ ದುರ್ದೈವವೇ
ಸರಿ. ಈ ಸ್ಥಿತಿಯು ಹೀಗೆಯೇ ಸಾಗಿದರೆ ವೀರಶೈವ ಸಮಾಜವು ತೀವ್ರ
ರಸಾತಳಕ್ಕೆ ಮುಟ್ಟುವದರಲ್ಲಿ ಎಳ್ಳಷ್ಟಾದರೂ ಸಂದೇಹವಿಲ್ಲ. ಇದರಲ್ಲಿ
ವಿರಕ್ತರದಾದರೂ ಏನು ತಪ್ಪು? ಇತ್ತೀಚೆಗೆ ಸರಕಾರದವರು ತಮ್ಮ
ಪ್ರಜೆಗಳಿಗಾಗಿ ಕೆಲವು ಹಕ್ಕುಗಳನ್ನು ಕೊಟ್ಟಿದ್ದರಿಂದ ಲೋಕಲ್‌ಬೋ
ರ್ಡುಗಳೂ ಮುನಸಿಪಾಲಿಟಿಗಳೂ ಮತ್ತು ಕಾಯಿದೆಕೌನ್ಸಿಲ್ಲುಗಳೂ ಮುಂ
ತಾದವುಗಳ ಚುನಾವಣಿಯಲ್ಲಿ ನಾ ಮುಂದೆ ನೀ ಮುಂದೆ ಎಂದು ಇತ್ತೀ
ಚೆಯ ಪಾಶ್ಚಾತ್ಯ ವಿದ್ಯಾವಿಭೂಷಿತರೂ ಸಮಾಜದ ಕಳಕಳಿಯುಳ್ಳವರೂ
ಹಾಗು ಪದವೀಧರರೂ ಮುಂತಾದವರೇ ಸ್ವಾರ್ಥದ ಮೂಲಕ ಅನೇಕ ಪಂಗ
ಡಗಳನ್ನು ಮಾಡಿ ತಮ್ಮ ಅನುಯಾಯಿಗಳ ಬಲದಿಂದ ಸಮಾಜವು ಅನೇಕ
ರೀತಿಯಿಂದ ಹಾಳಾಗುವದನ್ನು ಕಣ್ಣಾರೆ ಕಂಡು ತಮ್ಮ ಹೋರಾಟವನ್ನು
ಯಥಾಪ್ರಕಾರ ಸಾಗಿಸುವ ಇಚ್ಛೆಯುಳ್ಳವರಾಗಿರುವರು. ಅಂದ ಮೇಲೆ
ಅಶಿಕ್ಷಿತರೂ ಒಂದು ವೇಳೆ ಸುಶಿಕ್ಷಿತರಿದ್ದರೂ ಏಕ ಪಕ್ಷೀಯವಾದ ಪೌರ್ವಾತ್ಯ
ವಿದ್ಯಾಮಂಡಿತರೂ ಆದ ವಿರಕ್ತಜನರು ಅಂಧಶ್ರದ್ಧೆಯಿಂದ ಸುಮಾರು
೩೦೦ ವರ್ಷಗಳವರೆಗೆ ನಡೆಯುತ್ತ ಬಂದ ಅಶಾಸ್ತ್ರೀಯವಾದ ಸಮಯ
ಭೇದವನ್ನು ಹೇಗೆ ಬಿಟ್ಟಾರು? ಇನ್ನು ಮುಂದೆ ಶ್ರೀಮನ್ನಿರಂಜನ ಮೂರ್ತಿ
ಗಳು ಈ ಸಮಯಭೇದದ ಕಡೆಗೆ ಕಿಂಚಿತ್ತಾದರೂ ಲಕ್ಷ ಕೊಡಬಾರದು.
ಇದೇ ಧ್ಯೇಯವನ್ನಿಟ್ಟುಕೊಂಡು ವೀರಶೈವ ಸಮಾಜದ ಪ್ರಾಣಪ್ರತಿಷ್ಠಾ
ಪನಾಚಾರ್ಯರೂ ಮತ್ತು ಪರಮಪೂಜ್ಯರೂ ಆದ ಶ್ರೀಮನ್ನಿರಂಜನ
ಹಾನಗಲ್ಲ ಕುಮಾರಮಹಾಸ್ವಾಮಿಗಳು ಶ್ರೀ ಶಿವಯೋಗಮಂದಿರವೆಂಬ
ಒಂದು ಸಂಸ್ಥೆಯನ್ನು ಸ್ಥಾಪಿಸಿ ತದ್ವಾರಾ ಈ ಅಶಾಸ್ತ್ರೀಯವಾದ ಸಮಯ
ಭೇದವನ್ನಳಿದು ಗುರುವರ್ಗದವರಲ್ಲಿ ಮತ್ತು ವಿರಕ್ತರಲ್ಲಿ ಐಕ್ಯತೆಯನ್ನುಂ
ಟುಮಾಡಲು ದೀರ್ಘಪ್ರಯತ್ನ ಮಾಡಿದರು. ಅವರ ಇಚ್ಛಾನುಸಾರವಾಗಿ
ಆ ಸಂಸ್ಥೆಯು ಈಗ್ಯೂ ತನ್ನ ಕರ್ತವ್ಯವನ್ನು ನಡೆಸಿರುವದು. ಆದುದ
ರಿಂದ ವಿರಕ್ತರು ಈ ಸಮಯಭೇದದಲ್ಲಿ ತೊಡಕದೆ ಈ ಇಪ್ಪತ್ತನೆಯ

ಶತಮಾನದಲ್ಲಿ ಸ್ವರಾಜ್ಯ ಸಂಪಾದನೆಗಾಗಿ ಉಗ್ರ, ಸೌಮ್ಯವೆಂಬ ಅನೇಕ ಪಂಗಡಗಳಿದ್ದರೂ ಆ ಎಲ್ಲ ಪಂಗಡಗಳು ತಮ್ಮ ತಮ್ಮ ಪಂಥಗಳನ್ನು ಬಿಟ್ಟು ನೆಹರೂ ಕಮಿಟಿಗೆ ಸ್ವರಾಜ್ಯಘಟನೆಯ ಕೆಲವು ನಿಯಮಗಳನ್ನು ಮಾಡಲಿಕ್ಕೆ ಹೇಳಿ ಆ ಕಮಿಟಿಯು ನಿಯಮಕ್ಕನುಸಾರವಾಗಿ ಎಲ್ಲರೂ ಒಮ್ಮನಸ್ಸಿನಿಂದ ಹಿಂದುಸ್ಥಾನಕ್ಕೆ ಸಾಮ್ರಾಜ್ಯಾಂತರ್ಗತ ಸ್ವರಾಜ್ಯಬೇಕೆಂದು ಗೊತ್ತುಮಾಡಿದಂತೆ ವರ್ತಿಸಿದ್ದಾದರೆ ಸ್ವಲ್ಪ ವೇಳೆಯಲ್ಲಿಯೇ ಸಮಾಜೋದ್ಧಾರವಾಗುವದರಲ್ಲಿ ತಿಲಮಾತ್ರವಾದರೂ ಸಂಶಯವಿಲ್ಲ. ಮತ್ತು ಇದು ನಿರಂಜನ ಮೂರ್ತಿಗಳಿಗೆ ಸುಲಭ ಸಾಧ್ಯವಿರುವದು. ಪ್ರತಿವರ್ಷಕ್ಕೆ ಸುಮಾರು ೩೦೦ ರೂಪಾಯಿಗಳಿಂದ ೧೦,೦೦೦ ರೂಪಾಯಿಗಳ ವರೆಗೆ ಸ್ಥಾವರ ಆಸ್ತಿಯಿಂದ ಉತ್ಪನ್ನ ಬರುವಂಥ ವಿರಕ್ತಮಠಗಳು ವೀರಶೈವ ಸಮಾಜದಲ್ಲಿ ಸಾವಿರಾರು ಇರುತ್ತವೆ. ಮತ್ತು ಈ ವಿರಕ್ತಜನರು ಪೂರ್ವಾಶ್ರಮದೊಳಗಿನ ಜನರ ಮೇಲೆ ಪ್ರೇಮ ಮಾಡಕೂಡದೆಂದೂ ಮತ್ತು ಅವರ ಸಂಗಡ ವಿಶೇಷ ಸಂಬಂಧ ಇಡಕೂಡದೆಂದೂ ಶಾಸ್ತ್ರಗಳಲ್ಲಿ ಅನೇಕ ನಿರ್ಬಂಧಗಳಿರುವವು. ಇವರಿಗೆ ಹೊಟ್ಟೆಯ ಕಾಳಜೀ ಮಾಡದೆ ಸ್ವತಂತ್ರವಾಗಿ ಇರಲಿಕ್ಕೆ ಬರುವದು. ಇಂಥ ಸ್ಥಿತಿಯಲ್ಲಿ ವಿರಕ್ತರು ಸ್ವಾವಲಂಬಿಗಳಾಗಿ ಸಮಾಜೋದ್ಧಾರದ ಕೆಲಸಕ್ಕಾಗಿ ಸಮಯಭೇದವನ್ನು ಬಿಟ್ಟು ಕಂಕಣಬದ್ಧರಾಗಿ ನಿಂತರೆ ತೀವ್ರವೇ ಸಮಾಜೋದ್ಧಾರವಾಗುವದು ಆದರೆ ಇವರು ತಮ್ಮೊಳಗಿನ ದುರಭಿಮಾನವನ್ನು ಮತ್ತು ಹಟವನ್ನು ಬಿಟ್ಟು ಬಿಡಬೇಕು. ಮತ್ತು ಅದರಂತೆ ಎಲ್ಲ ವಿರಕ್ತ ಮುಂದಾಳುಗಳು ಒಂದಾಗಿ ತಾವೆಲ್ಲರೂ ಸಮಾನ ಅಧಿಕಾರವುಳ್ಳವರೆಂದೂ ಮತ್ತು ತಮ್ಮ ತಮ್ಮೊಳಗೆ ಏನೂ ಹೆಚ್ಚು ಕಡಿಮೆ ಇಲ್ಲವೆಂದೂ ತಮ್ಮ ವರ್ತನೆಯಿಂದ ಸಮಾಜವು ಒಪ್ಪುವಂತೆ ನಡೆದು ತೋರಿಸತಕ್ಕದ್ದು ಅವರು ಈವರೆಗೆ ವಿನಾಕಾರಣವಾಗಿ ಇತ್ತೀಚೆಗೆ ನಿರ್ಮಿಸಲ್ಪಟ್ಟ ಒಂದೊಂದು ಸ್ಥಾನದ ಅಭಿಮಾನವನ್ನು ಹಿಡಿದು ಜಗಳಾಡುತ್ತ ಕೂಡ್ರುವದನ್ನು ಬಿಟ್ಟು ತಮ್ಮ ಎಲ್ಲರ ನಿಜವಾದ ಪುರಾತನ ಹಾಗು ಪವಿತ್ರವಾದ ಶೂನ್ಯಸಿಂಹಾಸನವು ತೇರದಾಳದಲ್ಲಿರುವದು ಮತ್ತು ಅದೇ ತಮ್ಮೆಲ್ಲರಿಗೆ ಮುಖ್ಯ ಗುರುಪೀಠವೆಂದು ಮೊದಲಿನಂತೆ ಭಾವಿಸಿಕೊಂಡು ನಡೆದರೆ ಎಲ್ಲರಲ್ಲಿ ಕೂಡಲೆ ಐಕ್ಯತೆಯುಂಟಾಗುವದು. ಈ ಪ್ರಕಾರ ಎಲ್ಲ ವಿರಕ್ತರು ಒಂದಾದರೆ ಗುರುವರ್ಗದೊಳಗಿನ ಇತ್ತೀಚೆಯ ಚಳವಳಿಯು ತಾನಾಗಿಯೇ ನಾಶವಾಗಿ ಸಮಾಜೋದ್ಧಾರವಾಗುವದು.

ತೇರದಾಳಗ್ರಾಮವು ಪಟವರ್ಧನ ಜಹಾಗೀರದೊಳಗಿನ ಶ್ರೀಮಂತ ಸಾಂಗಲೀ ಸರಕಾರದವರ ಪಾಲಿಗೆ ಬಂದ ತಾಲೂಕಿನ ಸ್ಥಾನವಾಗಿದೆ. ಈ ಸರಕಾರದವರ ಶಾಂತತೆಯು ಹಾಗು ಸಮದೃಷ್ಟಿಯು ರಾಜ್ಯಛತ್ರದ ಕೆಳಗೆ ಶ್ರೀಮದನಾದಿ ಅಲ್ಲಮಪ್ರಭುದೇವರ ಬೃಹನ್ಮಠದೊಳಗಿನ ಎಲ್ಲ ಮಂಗಲ ಕಾರ್ಯಗಳೂ ಉತ್ಸವಗಳೂ ವಿಧಿಯುಕ್ತವಾಗಿ ಸಾಗಿರುವವು. ಬೃಹನ್ಮಠಕ್ಕೆ ದಾನವಾಗಿದ್ದ ಎಲ್ಲ ಸ್ಥಾವರ ಹಾಗು ಜಂಗಮ ಆಸ್ತಿಗಳ ಉತ್ಪನ್ನದ ಉಪಭೋಗವನ್ನು ಬೃಹನ್ಮಠದ ಪೂರ್ಣ ಮಾಲಕರೂ ಮತ್ತು ಮೂಲಪುರುಷನಾದ ಚೆನ್ನಪ್ಪದೇವನ ವಂಶದ ಪುರುಷ ಸಂತತಿಯ ಸ್ವಾಮಿ ಜನರೂ ನಿರಾಂತಕವಾಗಿ ಈವರೆಗೆ ಉಪಭೋಗ ಮಾಡುತ್ತಿರುವರು.

ತೇರದಾಳದ ಈ ಶೂನ್ಯಸಿಂಹಾಸನದ ವಿಷಯವಾಗಿ ಈವರೆಗೂ ಅನೇಕಾನೇಕ ಪ್ರಬಲವಾದ ಆಧಾರಗಳನ್ನು ಕೊಟ್ಟಿದ್ದಾಯಿತು. ಆದರೆ ಅದೇ ಜಗದ್‌ಗುರುಮಠದಲ್ಲಿರುವ ಇನ್ನೊಂದೆರಡು ಆಧಾರಗಳನ್ನು ಕೊಟ್ಟು ಈ ವಿಷಯವನ್ನು ಮುಗಿಸುತ್ತೇವೆ. ಅವಾವೆಂದರೆ ಚನ್ನಶ್ರೀಪ್ರಭು ಎಂಬ ಕವಿಯು ತನ್ನದೊಂದು ಸ್ತೋತ್ರದಲ್ಲಿ "ಶ್ರೀಮತ್ ಸಚ್ಚಿದಾನಂದ ಘನಪರಬ್ರಹ್ಮ, ಸಾಕ್ಷಾತ್ ಪರಶಿವಸ್ವರೂಪ, ಶ್ರೀಮದ್ದೇಶಿಕ ಷಟ್‌ಸ್ಥಲ ಚಕ್ರವರ್ತಿ, ವಿರಕ್ತಶಿಖಾಮಣಿ, ಮಲಮಾಯಾಸಂಗಭಂಗ, ಮಾಯಾ ಮದವಿಭಂಗ, ದುರಿತತಮಪತಂಗ, ಮಾಯಾಕೋಲಾಹಲ, ಮಾಯಾವಿಲಾಸನಿರಸನಚತುರ, ಕಲಿಕಲ್ಮಷನಿಮಗ್ನಜನಸಮುದ್ಧಾರಕ, ಮನೋಲಯೋಪದೇಶಕ, ಪರಮಪಾವನಶೀಲ. ಚಾರುತರಸನ್ಮೋಹನಾಂಗ, ಮದನಮರ್ದನ ಮುನಿಜಾಲನಮಿತ, ಸನಕಸನಂದಾದಿಪೋಷ, ಗಣವೃಂದ ಸೇವಿತ, ವರಗೋಕರ್ಣಕರ್ಣಭೂಷ, ಸನ್ನುತಾಗಮ, ನಿಗಮಗೋಚರ. ಕೃಪಾರ್ಣವ, ಪಕ್ಷಿವಾಹನಾಕ್ಷಪೂಜಿತ, ನಿತ್ಯನಿರಂಜನ. ನಿರಾಕಾರ. ನಿತ್ಯ ಪರಿಪೂರ್ಣ, ನಿಃಶೂನ್ಯ, ನಿರ್ಲೇಪ, ನಿರಾವರಣ, ಸತ್ವಾದಿಲಕ್ಷಣಲಕ್ಷಿತ. ಜಗದ್‌ವಿಸ್ತಾರಮೂಲಸ್ತಂಭಾಯಮಾನ. ಶೂನ್ಯಸಿಂಹಾಸನಾಧೀಶ, ಸಕಲ ಸಿಂಹಾಸನಾಧಿಪ, ಷಟ್‌ಸ್ಥಲಸ್ಥಾಪನಾಚಾರ್ಯವರ್ಯ, ಗುರುಕುಲಕೇತನಾಯಮಾನ, ಶ್ರೀಮದ್‌ರಾಜಾಧಿರಾಜಪೂಜಿತ, ಜಗದ್ಗುರೋ. ತ್ರಿದಳ ಪುರವಾಸ. ಪುರುವರಾಧೀಶ, ಬೃಹನ್ಮಠಾಧ್ಯಕ್ಷ, ಶ್ರೀಮದನಾದಿ ಚೆನ್ನಶ್ರೀ ಪ್ರಭೋ ಮಾಂ ಪಾಲಯ" ಎಂದು ಆತನ ನಿಜಸ್ವರೂಪವನ್ನೇ ಹೊಗಳಿರುವನು.

ಶ್ರೀಮನ್‌ಮಹಾನಾಯಿಕ ನಾಡಗೌಡಾ ಜುಗುನೂರಿ ಬಿರದಹೊನ್ನೇರ ಸಿದ್ಧಪ್ಪಾನಾಯಿಕ, ರೇವಪ್ಪಾ ದೇಸಾಯಿ ನಾಡಗೌಡಾ ಪ್ರಾಂತ ಗೋಕಾಕ, ವ ಸರದೇಸಾಯಿ ಸರನಾಡಗೌಡಾ ಸರಕಾರ ರಾಯಬಾಗ, ಪ್ರಾಂತ ತೇರದಾಳ ವ ಪಾತಶಾಹಾಪೂರ, ವ ನಾಡಗೌಡಾ ತಾಪೇವಾಜರೆ ವ ಚಂಡಗಡ ಮಹಾಮನಿ ಇವರು ಶಾಲಿವಾಹನ ಶಕೆ ೧೬೪೩ ಪ್ಲವನಾಮ ಸಂವತ್ಸರ ಆಶ್ವೀನ ವದಿ ಸಪ್ತಮಿ ಶನಿವಾರ, ಅಂದರೆ ತಾರೀಖು ೩೦ ಸಪ್ಟೆಂಬರ ಸನ್ ೧೭೨೧ ಇಸ್ವಿ ದಿವಸ ೧ ತಾಳ ಭೂಮಿಯನ್ನು ತೇರದಾಳದ ಶ್ರೀಮದನಾದಿ ಅಲ್ಲಮಪ್ರಭುದೇವರ ಮಠಕ್ಕೆ ದಾನವಾಗಿ ಕೊಟ್ಟಿರುವರಲ್ಲದೆ ಅವೇ ಸನದಿನಲ್ಲಿ ಪ್ರತಿವರ್ಷ ಜಗದ್ಗುರು ಮಠಕ್ಕೆ ೨೦ ಹೊನ್ನುಗಳನ್ನು ಕಾಣಿಕೆಯಾಗಿ ಕೊಡಬೇಕೆಂದು ಹೇಳಿರುವರು. ಮುಂದೆ ಇವರ ಮಕ್ಕಳಾದ ಶಿವಲಿಂಗಪ್ಪಾ ನಾಯಿಕ ವ ಸಿದ್ದಪ್ಪಾ ದೇಸಾಯಿ ಎಂಬವರು ಸೂರ್ ಸನ್ ಖಮಸ್ ಅಸರ್ಯನ್ ಮಯಾ ಅಲಫ್, ಅಂದರೆ ಶಾಲಿವಾಹನ ಶಕೆ ೧೬೪೬ ಕ್ರೋಧಿನಾಮ ಸಂವತ್ಸರ ಪುಷ್ಯವದಿ ಸಪ್ತಮಿ ಶುಕ್ರವಾರ, ಅಂದರೆ ತಾರೀಖು ೨೫ ಡಿಸೆಂಬರ ಸನ್ ೧೭೨೪ ಇಸ್ವಿ ದಿವಸ ತಮ್ಮ ತಂದೆಯವರು ಕೊಟ್ಟ ದಾನಪತ್ರಕ್ಕೆ ಸಮ್ಮತಿ ಪತ್ರವನ್ನು ಕೊಟ್ಟಿರುವರು. ಇವೆರಡೂ ಸನದುಗಳ ಶಿರೋಭಾಗದಲ್ಲಿ "ಶ್ರೀಮತ್‌ಸಚ್ಚಿದಾನಂದ ಘನ ಪರಬ್ರಹ್ಮ ಸಾಕ್ಷಾತ್‌ಶಿವಸ್ವರೂಪ, ಸಿಂಹಾಸನ ಶ್ರೀಪ್ರಭುದೇವರುಸ್ವಾಮಿ ಸಂಸ್ಥಾನ ಪ್ರಾಂತ ತೇರದಾಳ" ಎಂದು ಅಂದಿರುವರು. ಈ ವಕ್ಕಣಿಕೆಗಳಲ್ಲಿ ಸಿಂಹಾಸನವೆಂಬುವದನ್ನು ಸ್ಪಷ್ಟವಾಗಿ ಉಲ್ಲೇಖಿಸಿರುವರಲ್ಲದ ಈ ಬೃಹನ್ಮಠಕ್ಕೆ 'ಸ್ವಾಮಿ ಸಂಸ್ಥಾನ' ವೆಂದು ಅಂದಿರುವರು. ಅಂದ ಮೇಲೆ ಆ ಕಾಲಕ್ಕೆ ಈ ಬೃಹನ್ಮಠವು ಸಂಸ್ಥಾನಗಳಂತೆ ಅಷ್ಟೈಶ್ವರ್ಯದಿಂದೊಡಗೂಡಿ ಮೆರೆಯುತ್ತಿದ್ದಲಿಕ್ಕೆ ಸಾಕು. ಇದರಲ್ಲಿ ತೇರದಾಳಕ್ಕೆ ಪ್ರಾಂತವೆಂದು ಕರೆಯಬೇಕಾದರೆ ಆ ಕಾಲಕ್ಕೆ ತೇರದಾಳವು ದೊಡ್ಡ ಪಟ್ಟಣವಿರಬೇಕು. ಆದುದರಿಂದಲೇ ಪುಣೆಯ ಶ್ರೀಮಂತ ಪೇಶ್ವೆ ಸರಕಾರದವರು ಸೂರ್ ಸನ್ ೧೧೬೮ ಫಸಲಿಯಲ್ಲಿ ತೇರದಾಳ ಗ್ರಾಮದೊಳಗಿನ ಕಸಬುದಾರರ ಮೇಲೆ ಪ್ರತಿಯೊಬ್ಬನಿಗೆ ಪ್ರತಿಯೊಂದು ವರ್ಷಕ್ಕೆ ೧ ರೂಪಾಯಿಯಂತೆ "ಕಸಬುದಾರ ಪಟ್ಟಿ" ಯನ್ನು ಕೂಡ್ರಿಸಿ ಆ ವರ್ಷದಲ್ಲಿ ೧೪೪೬ ರೂಪಾಯಿಗಳನ್ನು ವಸೂಲ ಮಾಡಿದಂತೆ ಆ ವರ್ಷದ ತಾಳೇಬಂದದಿಂದ ಗೊತ್ತಾಗುತ್ತದೆ. ಅದರ ವಿವರವು:—ಲಿಂಗಾಯತ ಬಣಜಿಗರು ೬೦೬,

ಬೋಗಾರ ಹಾಗೂ ಜೈನ ಬಣಜಿಗರು ೭೬೪, ಕಂಚುಗಾರರು ೩೭೬, ಮುಮ್ಮಣಿಗರು ಮತ್ತು ನೇಕಾರರು ೨೦೦, ಅಂತೂ ೧೪೪೬ ಕಸಬುದಾರರಾಗುವರು. ಇದು ಅಲ್ಲದೆ ತೇರದಾಳ ಗ್ರಾಮಕ್ಕೆ ಒಂದು ನೂರು ಚಾಹೂರ ಅಂದರೆ ಸುಮಾರ ೨೦,೦೦೦ ಎಕರೆ ಸಾಗುಭೂಮಿ ಇರುವದು. ಇಷ್ಟು ಭೂಮಿಗಳನ್ನು ಸಾಗುಮಾಡಲಿಕ್ಕೆ ರೈತರೂ ಹಾಗೂ ಆ ರೈತರಿಗೆ ಉಪಯೋಗ ಬೀಳತಕ್ಕ ಹನ್ನೆರಡು ತರದ ಆಯಗಾರರೂ ಎಷ್ಟಿರಬೇಕೆಂಬುವದನ್ನು ವಾಚಕರೇ ಊಹಿಸಬಹುದು. ಇದರ ಮೇಲಿಂದ ಆ ಕಾಲಕ್ಕೆ ತೇರದಾಳವು ದೊಡ್ಡ ಪಟ್ಟಣವಾಗಿತ್ತೆಂಬುವದು ಸಹಜವಾಗಿ ಸಿದ್ಧವಾಗುವದು. ಶ್ರೀಮಂತ ಪೇಶ್ವೆ ಸರಕಾರದವರು ಸೂರ್ ಸನ್ ೧೧೬೭ ಫಸಲಿಯಿಂದ ೧೧೭೬ ಫಸಲಿವರೆಗೆ ಅನೇಕಸಾರೆ ಶ್ರೀ ಪ್ರಭುಸ್ವಾಮಿಗಳ ಮಠಕ್ಕೆ ಕಾಣಿಕೆಗಳನ್ನು ಕೊಟ್ಟು ಖರ್ಚ ಹಾಕಿದ್ದು ಆ ವರ್ಷಗಳ ತಾಳೇಬಂದಗಳಲ್ಲಿ ಕಾಣಬಹುದು. ಈ ವರ್ಷಗಳಲ್ಲಿ ಒಮ್ಮೆ ಶ್ರೀಮಂತ ಪೇಶ್ವೆ ಸರಕಾರದವರು ಯಾವದೋ ಒಂದು ಹರಕೆಯು ಶ್ರೀ ಪ್ರಭುಸ್ವಾಮಿಗಳ ಆಶೀರ್ವಾದದಿಂದ ಕೈಗೂಡಿದ್ದಕ್ಕಾಗಿ ಆ ವರ್ಷ ಮೂನ್ನೂರು ರೂಪಾಯಿಗಳನ್ನು ಕಾಣಿಕೆಯಾಗಿ ತಾಳೇಬಂದದಲ್ಲಿ ಖರ್ಚು ಹಾಕಿರುವರು.

ಇಷ್ಟು ಆಧಾರಗಳನ್ನು ಕೊಟ್ಟರೂ ಇನ್ನೂ ಕೆಲವು ಮಹನೀಯರು ಈ ಬಗ್ಗೆ ಶಿಲಾಶಾಸನಗಳೇನಾದರೂ ಇರುವವೇನೆಂದು ಕೇಳಬಹುದು. ಆದರೆ ಶಿಲಾಲಿಪಿಗಳಿಂದ ಸಿದ್ಧವಾಗತಕ್ಕವುಗಳಷ್ಟೇ ನಿಜವಾದವ್ದವು ಉಳಿದವುಗಳು ಸುಳ್ಳೆಂದು ಒಪ್ಪಲಿಕ್ಕೆ ಬರಲಾರದು. ಯಾಕಂದರೆ ಆದ್ಯ ಶ್ರೀ ಶಂಕರಾಚಾರ್ಯರ ಬಗ್ಗೆ ಈವರೆಗೂ ಎಲ್ಲಿಯೂ ಶಿಲಾಲೇಖಗಳು ಸಿಕ್ಕಿಲ್ಲವು. ಹಿಂದಮೇಲೆ ಶ್ರೀ ಶಂಕರಾಚಾರ್ಯರು ಆಗಿ ಹೋದದ್ದೇ ಸುಳ್ಳನ್ನಬೇಕೇ ಹ್ಯಾಗೆ? ಅದು ಹಾಗೆ ಆಗಲಾರದು. ಯಾಕಂದರೆ ಸಂಶೋಧನದ ಕಾರ್ಯದ ಸಾಧನಗಳಲ್ಲಿ ಶಿಲಾಲೇಖಗಳು ಒಂದು ಬಗೆಯ ಸಾಧನಗಳಾಗಿವೆ ಇಷ್ಟೇ. ಇವೆಲ್ಲಕ್ಕೂ ನಮಗೆ ಹೆಚ್ಚಿನ ಸಾಧನಗಳೆಂದರೆ ತೇರದಾಳದ ಶ್ರೀಮದನಾದಿ ಅಲ್ಲಮಪ್ರಭುದೇವನನ್ನು ಕುಲಸ್ವಾಮಿಯಾಗಿ ಸದಾವಕಾಲದಲ್ಲಿ ಪೂಜೆಮಾಡುವ ಶ್ರೀಮಂತ ಒಂಟಿಮುರಿ ಹಾಗೂ ಹನಗಂಡಿ ಮೊದಲಾದ ಸಂಸ್ಥಾನಿಕರ ಮೊದಲುಗೊಂಡು ಹಲವು ಜಾತಿಯ ಸುಮಾರು ೧೦,೦೦೦ ಶ್ರೀಪ್ರಭುಭಕ್ತರ ಬುನಾದಿ ಮನೆತನಗಳೇ ನಮಗೆ ಪ್ರಸಿದ್ಧ ಶಿಲಾಲೇಖಗಳಂತೆ ಇರುವವು.

ಈ ಶಿಲಾಲೇಖಗಳಿಗಿಂತಲೂ ಹೆಚ್ಚಿನ ಅರ್ಥಗಳನ್ನು ಕೊಡುವ ಅನೇಕ ಸ್ಥಾನಿಕ ಸಾಂಕೇತಿಕ ಕುರುಹುಗಳು ಈಗ್ಯೂ ತೇರದಾಳದ ಶ್ರೀಮನ್ ನಿರಂಜನ ಜಗದ್ಗುರು ಶ್ರೀಮದನಾದಿ ಅಲ್ಲಮಪ್ರಭುಸ್ವಾಮಿಗಳ ಬೃಹನ್ಮಠದಲ್ಲಿ ಇರುವವು. ಉದಾಹರಣೆಗಾಗಿ :—ಶ್ರೀ ಸ್ವಾಮಿಗಳ ಶೂನ್ಯ ಸಿಂಹಾಸನವು ಇರುವ ಬೃಹನ್ಮಠದ ಕಟ್ಟಡಕ್ಕೆ " ಗುರುಮಠ " ವೆಂದೆನ್ನುವರು. ಆ ಗುರುಮಠದ ಹೊರಮುಗ್ಗಲಿಗೆ ಎಡಬದಿಗೆ ಮೂರು ಹಾಗು ಬಲಗಡಿಗೆ ಮೂರು ಹೀಗೆ ಆರುಕಲ್ಲಿನ ಗಾಲಿ ( ಚಕ್ರ ) ಗಳು ಇರುವವು. ಈ ಗಾಲಿಗಳನ್ನು ಅದೇ ಕಟ್ಟಡದ ಕಲ್ಲಿನಲ್ಲಿಯೇ ಒಡೆದು ಕಾಣುವಂತೆ ಕಟೆದಿರುವರು. ಇವುಗಳಿಗೆ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ ಶರಣ ಹಾಗೂ ಐಕ್ಯ ಎಂಬ ಷಟ್‌ಸ್ಥಲಗಳೆನ್ನುವರು. ಇಂಥ ಷಟ್‌ಸ್ಥಲದ ಮೇಲೆ ಇರುವ ಶೂನ್ಯಸಿಂಹಾಸನವು ಷಟ್‌ಸ್ಥಲ ಚಕ್ರವರ್ತಿಯಾದ ಶ್ರೀಮದನಾದಿ ಅಲ್ಲಮಪ್ರಭುದೇವನದೇ ಇರುವದರಲ್ಲಿ ಯಾವ ಸಂಶಯವೂ ಇರುವದಿಲ್ಲ. ಈ ಬಗೆಯ ಏರ್ಪಾಟವು ಪ್ರಪಂಚದೊಳಗಣ ಇನ್ನಾವ ವಿರಕ್ತಮಠದ ಕರ್ತೃಗದ್ದುಗೆಯ ಕಟ್ಟಡಕ್ಕೆ ಇಲ್ಲದಿರುವದೇ ಇದರ ವೈಶಿಷ್ಟ್ಯವು. ಮತ್ತು ಈ ಶೂನ್ಯಸಿಂಹಾಸನದ ಎದುರಿನಲ್ಲಿರುವ ಜಯಸ್ತಂಭದ ಕೆಳಭಾಗದಲ್ಲಿ ಮೂಗಿನಲ್ಲಿ ಕವಡಿಯನ್ನು ಪೋಣಿಸಿದ ಹಾಗು ಕೈಕಾಲುಗಳನ್ನು ಅಭಿನಯಿಸುತ್ತ ನರ್ತನ ಮಾಡುವ ಒಂದು ಸ್ತ್ರೀವಿಗ್ರಹವನ್ನು ಕೊರೆದಿರುವರು. ಹಿಂದಕ್ಕೆ ಬನವಾಸಿಯಲ್ಲಿ ಈ ರೀತಿ ಮಾಯೆಯನ್ನು ಸೋಲಿಸಿ " ಮಾಯಾಕೋಲಾಹಾಳ" ನೆಂಬ ಬಿರುದನ್ನು ಶ್ರೀಪ್ರಭುವು ಪಡೆದನೆಂದು ಈ ವಿಗ್ರಹವನ್ನು ಕುರಿತು ಈಗ್ಯೂ ಜನರು ಹೇಳುವರು.

# ೫ನೆಯ ಪ್ರಕರಣ.

## ಚನ್ನಪ್ಪದೇವನು.

ಕಲಿಕಲ್ಮಷನಿಮಗ್ನ ಜನಸಮುದ್ಧಾರಕನೂ ಮನೋಲಯೋಪ ದೇಶಿಕನೂ ಮಾಯಾಮದವಿಭಂಗನೂ ಆದ ಶ್ರೀಮದನಾದಿ ಅಲ್ಲಮಪ್ರಭುದೇವನು ತೇರದಾಳಕ್ಕೆ ಬಂದಾಗ ಆತನ ಸಂಗಡ ಬಂದ ಅನೇಕ ಪ್ರಮಥ ಗಣಂಗಳಲ್ಲಿ ಮುಖ್ಯವಾಗಿ ಚನ್ನಪ್ಪದೇವನೆಂಬವನೊಬ್ಬನು ಇದ್ದನೆಂದು ನಾವು ಹಿಂದಿನ ಪ್ರಕರಣದಲ್ಲಿ ಹೇಳಿದ್ದು ವಾಚಕರ ಜ್ಞಾಪಕದಲ್ಲಿರಬಹುದು. ಶ್ರೀಪ್ರಭುದೇವನು ತೇರದಾಳದಲ್ಲಿ ತಾನು ನಿರ್ವಯಲವಾಗುವ ಸಮಯದಲ್ಲಿ ಚನ್ನಪ್ಪದೇವನನ್ನು ಹತ್ತರ ಕರೆದು, ಏನುಬೇಕು ಬೇಡು, ಎಂದು ಆಜ್ಞಾಪಿಸಲು, ಮೋಕ್ಷೈಕಕಾಂಕ್ಷಿಯಾದ ಚನ್ನಪ್ಪದೇವನು ತನ್ನ ಕಣ್ಣೆದುರಿಗೆ ಅನೇಕ ಜನರ ಕಲ್ಯಾಣವಾಗುತ್ತಿರುವದನ್ನು ಕಂಡು ನಿನ್ನ ಭಕ್ತಿಯು ಹೊರ್ತು ನನಗೆ ಬೇರೊಂದು ಬೇಡವು. ಅದೊಂದನ್ನೇ ದೃಢವಾಗಿ ಕೊಡು ಮತ್ತು ಅದರಿಂದಲೇ ನನಗೆ ಪರಮಗತಿಯುಂಟು ಎಂದು ಬೇಡಿದನು. ಇವನ ವಿಷಯವಾಗಿ ಇಲ್ಲಿ ನಾಲ್ಕು ಮಾತುಗಳನ್ನು ಹೆಚ್ಚಿಗೆ ಹೇಳುವದು ಅವಶ್ಯವಿದೆ. ಈ ಚನ್ನಪ್ಪದೇವನ ಸೂತ್ರ ಪಡ್ವಿಡಿ, ಸಧ್ಯೋಜಾತ ಮುಖ, ರೇವಣಾರಾಧ್ಯ ಗುರು, ಪೂರ್ವ ದಿಕ್ಕು, ಪೀತ ವರ್ಣ, ರಂಭಾಪುರಿ ಸಿಂಹಾಸನ ವೀರ ಗೋತ್ರ, ಏಕಾಕ್ಷರ ಪ್ರವರ, ಆಶ್ವಕ್ಥ ದಂಡ, ನಕಾರ ಬೀಜ ಮಂತ್ರ, ಗ್ರಹಸ್ಥಾಶ್ರಮು, ಆಚಾರ ಲಿಂಗ, ನಾಶಿಕ ಸ್ಥಾನ. ಪೃಥ್ವಿ ತತ್ವ, ಮತ್ತು ಶಿವಗಾಯಿತ್ರಿ ಮಂತ್ರ ಈ ಪ್ರಕಾರ ಇರುತ್ತವೆ ನಿರಂಜನ ವಂಶರತ್ನಾಕರದಲ್ಲಿ “ ನಿಡುಗಲ್ಲ ಮುಕ್ಕಾಮಿನಲ್ಲಿ ಶ್ರೀಚನ್ನಪ್ಪನಿಗೆ ಶ್ರೀ ರುದ್ರಮುನಿ ಸ್ವಾಮಿಗಳ ಕಡೆಯಿಂದ ಜ್ಞಾನೋಪದೇಶವಾಯಿತೆಂದೂ ಅಲ್ಲಿ ಬೇಡರ ಕುಲದ ರಾಜನಿಗೆ ಲಿಂಗಧಾರಣವಾದ ಮೇಲೆ ಆ ಸ್ಥಳದಲ್ಲಿ ಅವನು ಶ್ರೀಬಸವೇಶ್ವರನ ಕರುಣದಿಂದ ಶರಣರ ಮಹತ್ವವನ್ನು ಹೇಳಿದನೆಂದೂ ಅಲ್ಲಿಂದ ನಾಯಕನಹಟ್ಟಿಗೆ ಮತ್ತು ನಾಯಕನಹಟ್ಟಿಯಿಂದ ತೇರದಾಳಕ್ಕೆ ಶ್ರೀಪ್ರಭುದೇವನ ಸಂಗಡ ಬಂದನೆಂದೂ” ಈ ಚನ್ನಪ್ಪನ ವಿಷಯವಾಗಿ ವರ್ಣನೆಯದೆ ಪಾವುಗಡ ತಾಲೂಕಿನ ನಿಡಗಲ್ಲಲ್ಲಿ ಇರುಂಗೊಳ್ ಎಂಬ ಹೆಸರಿನ ರಾಜನು ೧೩ನೆಯ ಶತಮಾನದ ಮಧ್ಯದಲ್ಲಿ ಆಳುತ್ತಿದ್ದನು. ಇವನು ಕ್ರಿ. ಶ. ೧೨೩೨ರ ಸುಮಾರಿನಲ್ಲಿ ಪಾರ್ಶ್ವ

ಜಿನಾಲಯಕ್ಕೆ ಭೂದಾನ ಕೊಟ್ಟಿದ್ದರ ವರ್ಣನೆಯು ಪಾವಗಡದ ೫೨ನೆಯ
ಶಾಸನದಲ್ಲಿ ಹೇಳಿದೆ. ಅದರಂತೆ ಕ್ರಿ. ಶ. ೧೨೪೪ರ ಸುಮಾರಿನಲ್ಲಿ ಈ
ಇರುಂಗೊಳ್ಳದ ರಾಜನ ಆಳಿಕೆಯಲ್ಲಿ ನಿಡುಗಲ್ಲಿನ ವೈಶ್ಯಜನರು ನಿಡುಗ
ಲ್ಲೊಳಗಿನ ನರಕೇಶ್ವರ ದೇವರಿಗೆ ಭೂದಾನ ಕೊಟ್ಟಿದ್ದರ ವರ್ಣನೆಯು
ಪಾವಗಡದ ೫೦ನೆಯ ಶಾಸನದಲ್ಲಿ ಹೇಳಿದೆ. ನಿಡುಗಲ್ಲದ ಅರಸರು
ಚೋಳವಂಶದವರಿದ್ದರೆಂದು ಎಷ್ಟೋ ಜನರ ಅಭಿಪ್ರಾಯವದೆ. ಆದರೆ
ನಿರಂಜನವಂಶರತ್ನಾಕರ ಗ್ರಂಥದಲ್ಲಿ ನಿಡುಗಲ್ಲದ ಅರಸರು ವಾಲ್ಮೀಕಿ
( ಬೇಡರ ) ಕುಲದವರೆಂದು ಹೇಳಿದೆ. ಒಟ್ಟಿನ ಮೇಲೆ ನಿಡುಗಲ್ಲು ಪೂರ್ವ
ದಿಂದಲೂ ರಾಜರ ಸ್ಥಾನವಿದ್ದಂತೆ ಕಂಡು ಬರುತ್ತದೆ. ಆದುದರಿಂದ
ಶ್ರೀಪ್ರಭುದೇವನೂ ಚನ್ನಪ್ಪನೂ ನಿಡುಗಲ್ಲಿಗೆ ದಯಮಾಡಿಸಿದ್ದು ಸಹ
ಜವೆನಿಸುತ್ತದೆ. ಮೇಲಿನ ವಿವೇಚನಗಳಿಂದ ನೋಡಲಾಗಿ ಈ ಚನ್ನ
ಪ್ಪನು ಪ್ರಸಿದ್ಧ ವಿನ್ವನ್ಮಣಿಯೆಂದು ಕಂಡು ಬರುತ್ತದೆ. ಇವನು ಷಟ್‌ಸ್ಥ
ಲದ ಮೇಲೆ ಕೆಲವು ವಚನಗಳನ್ನು ಬರೆದಂತೆ ಕಂಡು ಬರುತ್ತದೆ. ಇವನ
ಮುದ್ರಿಕೆಯು "ಚನ್ನಪ್ರಿಯ ನಿರ್ಮಾಯ ಪ್ರಭುವೆ" ಎಂದು ಅದೆ. ಆ
ಎಲ್ಲ ವಚನಗಳು ಉಪಲಬ್ಧವಿಲ್ಲದಿದ್ದರೂ ಪಾದೋದಕ ಪ್ರಸಾದಿಸ್ಥಲಗಳ
೧೨ ವಚನಗಳು ಮಾತ್ರ ನಮಗೆ ದೊರೆತಿವೆ ವಾಚಕರ ಅವಗಾಹನಕ್ಕಾಗಿ
ಅವುಗಳನ್ನು ಕೆಳಗೆ ಕೊಟ್ಟಿದೆ.

(೧) ನಾದಬಿಂದು ಕಳೆಗಳಿಲ್ಲದ್ದಂದ್ನು, ಸುರಾಳ ನಿರಾಳ ವಿಲ್ಲದ್ದಂದು,
ಅಂಡ ಪಿಂಡ ಬ್ರಹ್ಮಾಂಡಗಳು ಮೊಳೆದೋರದ್ದಂದು, ಪಂಚಮೂರ್ತಿಗಳ
ನಾಮವಿಲ್ಲದ್ದಂದು, ಪಂಚಪ್ರಾಣ ಮದನವು ದನಿದೋರದ್ದಂದು, ಮಹಾಪ್ರ
ಕಾಶವೇ ತಾನೇಯಾದ ಚಿತ್ಪ್ರಸಾದವು. ಪ್ರಕಾರವೇ ಅನಂತಕೋಟಿ ಸೋಮ
ಸೂರ್ಯರ ಪ್ರಕಾಶವನೊಳಕೊಂಡಿತ್ತು, ಸಾಕಾರವೇ ಚಿತ್‌ಶಕ್ತಿಗೆ ಆದಿ
ಯಾಗಿ ಅನಂತಕೋಟಿ ಶಕ್ತಿಗಳಿಗಾಶ್ರಯವಾಗಿತ್ತು, ದಕಾರವೇ ದಶದಿಶಭ
ರಿತ ಪೂರ್ಣಾಕಾರ ಲಿಂಗವಾಯಿತ್ತು. ಸತ್ತುಚಿತ್ತಾನಂದನಿತ್ಯಪರಿಪೂರ್ಣ
ನಾಮವುಳ್ಳದ್ದೇ ಪ್ರಸಾದ. ಈ ಭೇದವನರಿದುಕೊಳ್ಳಬಲ್ಲಡೆ ಗುರುಲಿಂಗ
ಜಂಗಮವೆಂದೆನ್ನಬಹುದು. ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ
ಶರಣೈಕ್ಯರೆಂದೆನ್ನಬಹುದು. ಇದನರಿಯದೆ ಕೊಂಡ ಭಕ್ತಂಗೆ ಕೊಟ್ಟ
ಜಂಗಮಕ್ಕೆ ರೌರವನರಕವೆಂದುದು - ಸಾಕ್ಷಿ: ಜ್ಞಾನಹೀನ ಗುರುಪ್ರಾಪ್ತಿಃ।
ಶಿಷ್ಯಜ್ಞಾನವಿವರ್ಜಿತಂ ॥ ಅಂಧಕಾಂಧಕಾರಯುಕ್ತಂ। ದ್ವಿವಿಧಂ ಪಾತಕಂ

ಭವೇತ್ ॥ ಎಂದುದಾಗಿ ಚೆನ್ನಪ್ರಿಯ ನಿರ್ಮಾಯ ಪ್ರಭುವೇ ನಿಮ್ಮ ಶೃತಿ ಸಾಕ್ಷಿಯಾಗಿ ಛೀ ಎನ್ನದೆ ಮಾಣ್ಬನೇ ನಿಮ್ಮ ಶರಣನು.

(೨) ಪ್ರಸಾದ ಪ್ರಸಾದವೆಂದು ಒಪ್ಪಿಕ್ಕಿ ನುಡಿವ ಚಿಪ್ಪುಗಳು ನೀವು ಕೇಳಿರೋ? ಕಾಯಪ್ರಸಾದವನರಿದು, ಕರಣಪ್ರಸಾದವನರಿದು, ಜೀವಪ್ರಸಾದವನರಿದು. ನಿಜಪ್ರಸಾದವ ತಿಳಿದು ಕೊಳ್ಳಬಲ್ಲಡೆ ಪ್ರಸಾದವೆಂಬೆ. ಇದನರಿಯದೆ ಕೊಂಬವರ ಕಂಡು ಪ್ರಸಾದವ ಕೊಂಡವರ ಕಂಡವರ ಕಂಡು ಕಾದಿಯ ಹೊಲಿದರೆ ಕುಂಟಿಳಿಬಿದ್ದಂತೆ, ಭಕ್ತರ ಕಂಡು ನಾನು ಭಕ್ತನೆಂದು ಓಗರವ ನೀಡಿಸಿಕೊಂಡು, ಅಯ್ಯಾ, ಹಸಾದ ಪ್ರಸಾದವ ಸಲಿಸೆಂದು ಪಡಕೊಂಡ ಭಕ್ತನ ಲಿಂಗವಿಕಾರವು ಮುನ್ನಿನಂತೆ ಈ ಪೂರ್ವರ ನಡತೆ ಎಂತು ಇತ್ತೆಂದಡೆ, ಬಳಿಗುರುಡ ಹಿಡಕೊಂಡು ಹಳ್ಳವಬಿದ್ದಂತೆಕಾಣಾ ಚೆನ್ನಪ್ರಿಯ ನಿರ್ಮಾಯ ಪ್ರಭುವೇ.

(೩) ಪ್ರಸಾದ ಪ್ರಸಾದವೆಂದು ನುಡಿವಿರಿ ಎಲ್ಲರಿಗೆಲ್ಲಿಯದೊ ಪ್ರಸಾದ. ಈ ಪ್ರಸಾದದ ಭೇದವಬಲ್ಲ ಬಸವಣ್ಣ. ಈ ಪ್ರಸಾದದ ಭೇದವ ಬಲ್ಲ ಚನ್ನಬಸವಣ್ಣ, ಈ ಪ್ರಸಾದದ ಭೇದವ ಬಲ್ಲ ಪ್ರಭುದೇವರು ಮೊದಲಾದ ಪ್ರಮಥಗಣಂಗಳಲ್ಲದೆ ಮಿಕ್ಕಿನ ಜೀವಜಾಳಿಗಳಿಗೆ ಪ್ರಸಾದವೆಲ್ಲಿಯದೋ? ಗಡಿಗೆಯೊಳಿದ್ದಡೆ ಬೋನ, ಹರಿವಾಣಕ್ಕೆ ಬಂದಾಗ್ಗೆ ನೈವೇದ್ಯ, ಜಂಗಮ ಮುಟ್ಟಿದಾಗಲೇ ಪ್ರಸಾದವೆಂದುಕೊಂಡು ತಮ್ಮ ಉದರಾಗ್ನಿಯ ಅಡಗಿಸಿಕೊಂಡು ತಮ್ಮ ಉದರಕ್ಕೆ ಹೊಂದಿದ್ದಲ್ಲಿ ಈ ಮಗಡವಾಯಿತ್ತು. ಜನ್ಮ ಜನ್ಮವ ಬಿಟ್ಟು ಬಂದೆವು. ಹೊರಗಗ್ಗಣಿಯ ತನ್ನಿಯೆಂಬ ಹೊಲೆಮಾದಿಗರ ಮೂಗು ಕೊಯ್ಯದೆ ಮಾಣ್ಬನೇ ನಿಮ್ಮ ಶರಣ ಚನ್ನಪ್ರಿಯ ನಿರ್ಮಾಯ ಪ್ರಭುವೇ.

(೪) ಪ್ರಸಾದ ಪ್ರಸಾದವೆಂಬುದು ಎಲ್ಲರಿಗೆಲ್ಲಿಯದೋ? ಪ್ರಸಾದ, ಪ್ರಸಾದವೆಂಬುದು ಅಚಲ, ಅವಿನಾಶ, ಅನಿರಳ, ದ್ವಂದ್ವಾತೀತ, ಬಂಧಮೋಕ್ಷಕ್ಕೆ ಅತೀತವು. ಓಗರವು ಪ್ರಸಾದವಲ್ಲ. ಓಗರ ಪ್ರಸಾದವೆಂದು ಕೊಟ್ಟರೆ ತಾ ಗುರುವಲ್ಲ ಕೊಂಡಾತ ಭಕ್ತನಲ್ಲ, ಓಗರ ಪ್ರಸಾದವೆಂದು ಕೊಂಡು ಮಲಮೂತ್ರವ ಬಿಡುವ ಹೊಲೆಮಾದಿಗರ ಮೂಗ ಕೊಯ್ಯದೆ ಮಾಣ್ಬನೇ ನಿಮ್ಮ ಶರಣ ಚನ್ನಪ್ರಿಯ ನಿರ್ಮಾಯ ಪ್ರಭುವೇ.

(೫) ಪ್ರಸಾದ ಪ್ರಸಾದವೆಂದು ಕೊಂಬಿರಿ. ಪ್ರಸಾದ ಕೆಡುವದೇ? ಪ್ರಸಾದವ್ರೊಮ್ಮೆ ಸುಗಂಧವೇ? ಪ್ರಸಾದವೊಮ್ಮೆ ದುರ್ಗಂಧವೇ? ಪ್ರಸಾದವು ಶಬ್ದ ಸ್ಪರ್ಶ ರೂಪ ರಸ ಗಂಧಕತೀತವು. ಓಗರ ಪ್ರಸಾದವೆಂದು ಕೊಂಡು ರೋಗ ಬಂದಿತ್ತೆಂದು ವೈದ್ಯಕಾರನ ಬಳಿಗೆ ಹೋಗಿ ವೈದ್ಯನ ಕೊಂಡು ಭಾಂಡವ ತೊಳೆದು ರೋಗ ಹೋಯಿತೆಂದು ನಲಿದಾಡಿ ಭಕ್ತ ಜಂಗಮರು ನಾವೆಂದು ನುಡಿದ ಮುಚ್ಚಟ ಮುದಿನಾಯಿಗಳ ಮೂಗ ಕೊಯ್ದು ಇಟ್ಟೆಂಗಿಯ ತಿಕ್ಕಿ ಮೇಲು ಮುಖವಾಗಿ ಅಟ್ಟೆಂದಾತ ನಿಮ್ಮ ಶರಣ ಚನ್ನಪ್ರಿಯ ನಿರ್ಮಾಯ ಪ್ರಭುವೇ.

(೬) ಪಾದೋದಕ ಪಾದೋದಕವೆಂದು ನುಡಿವಿರಿ. ಪಾದೋದಕದ ಭೇದವ ಬಲ್ಲರೆ ಹೇಳಿರೋ, ಅರಿಯದಿದ್ದೊಡೆ ಕೇಳಿರೋ, ಪರಾತ್ಪರಾನಂದ ಚಿದ್‌ಬಿಂದುವೆ ಪಾದೋದಕ. ಶ್ರೀಗುರುವಿನ ದ್ವಿಪಾದವೇ ಭ್ರೂಮಧ್ಯದಲ್ಲಿರ್ದುದ ನರ್ಚಿಸಿ, ಚಿದಾನಂದಬಿಂದು ತೊಟ್ಟಿಟ್ಟುದೇ ಪಾದೋದಕ. ಈ ಭೇದವನರಿದು ಕೊಳಬಲ್ಲಡೆ ಪಾದೋದಕವೆಂದೆನ್ನಬಹುದು. ಈ ಭೇದವನರಿಯದೆ ಕೆರೆ ಬಾವಿಯ ನೀರು ತಂದು ಮನೆಗೆ ಬಂದಲ್ಲಿ ಅಗ್ಗಣಿವೆಂಬಿರಿ, ಜಂಗಮಪಾದವ ಮೇಲೆ ಎರದಲ್ಲಿ ತೀರ್ಥವೆಂಬಿರಿ, ಆ ತೀರ್ಥವೆಂದುಕೊಂಡು ನಿಮ್ಮ ತೃಷೆಯನಡಗಿಸಿಕೊಂಡು, ಕಡೆಯಲ್ಲಿ ಮೂತ್ರವ ಬಿಟ್ಟಿವು ಹೊರಗಗ್ಗಣಿಯ ತನ್ನಿಯೆಂಬಿರಿ. ನೀರು ತೀರ್ಥವಲ್ಲ ಕೊಟ್ಟಾತ ಜಂಗಮವಲ್ಲ, ಕೊಂಡಾತ ಭಕ್ತನಲ್ಲ. ಇವರಿಬ್ಬರ ನಡತೆ ಎಂತು ಇತ್ತೆಂದೊಡೆ ಎಕ್ಕಲ ಅವೇಧ್ಯವ ತಿಂದು ಒಂದರ ಮೋರೆಯ ಒಂದು ಮೂಸಿ ನೋಡಿದಂತೆ ಆಯಿತು ಕಾಣಾ ನಿಮ್ಮ ಶರಣ ಛೀಯೆಂದ ಚನ್ನಪ್ರಿಯ ನಿರ್ಮಾಯ ಪ್ರಭುವೇ.

(೭) ಪಾದೋದಕ ಕೊಂಡೆನೆಂಬ ಅಣ್ಣಗಳು ನೀವು ಕೇಳಿ ಭೋ. ಪಾದೋದಕದ ನಿಲುವು ಬಲ್ಲರೆ ಹೇಳಿರೋ, ಅರಿಯದಿದ್ದೊಡೆ ಕೇಳಿರೋ. ಪಾಕಾರವೆ ಪರಾತ್ಪರ ನಾಮವುಳ್ಳದ್ದು ಪರಬ್ರಹ್ಮವು ಪರಮಾನಂದಸ್ವರೂಪವು, ದೋಕಾರವೆ ದುರಿತವಿನಾಶನ, ದಕಾರವೆ ದಶದಿಶಭರಿತ ಪೂರ್ವ ಚಿದಂಬುಧಿ. ದಕಾರವೆ ದಯದೋರಿತ್ತು, ಪರಮಜ್ಞಾನದ ಕಕಾರವೆ ಕರ್ಮವಿನಾಶನವೆನಿಸಿತ್ತು. ಇಂತೆಂಬ ಪಾದೋದಕವ ನೀಡಿದಾತನೆ ಗುರುಲಿಂಗ ಜಂಗಮವೆಂದೆನ್ನಬಹುದು, ಕೊಂಡಾತ ಸದ್ಭಕ್ತನೆನಬಹುದು. ಕೊಂಡು

ದಕ್ಕೆ ಕಾಯ ಶುದ್ಧ, ಕರಣ ಶುದ್ಧ ಜೀವ ಶುದ್ಧ, ಭಾವ ಶುದ್ಧ, ಈ ಚತುರ್ವಿಧವು ಶುದ್ಧ. ಅದೆಂತೆಂದೊಡೆ ಕಾಯ ಶುದ್ಧಪ್ರಸಾದವಾಯಿತ್ತು, ಜೀವ ಶುದ್ಧಪ್ರಸಾದವಾಯಿತು, ಜೀವ ಪರಾತ್ಪರಪ್ರಸಾದವಾಯಿತ್ತು. ಈ ಚತುರ್ವಿಧ ಪ್ರಸಾದವ ಮಾಡಿದಾತ ನಿಮ್ಮ ಶರಣ. ಹೀಗಲ್ಲದೆ ಜಲವ ತೊಳೆದು ಕುಡಿವ ಮಲದೇಹಿಗಳ ಮುಖವ ನೋಡಲಾಗದಯ್ಯಾ. ಇದಕ್ಕೆ ಸಾಕ್ಷಿ:—ಪಾಕಾರಂ ಪರಮಾನಂದಂ । ದೋಕಾರಂ ದೋಷನಾಶನಂ ॥ ದಕಾರಂ ದಹತೆ ಜನ್ಮಂ । ಕಕಾರಂ ಕರ್ಮಭೇದನಂ ॥ ಎಂದುದು ಚೆನ್ನಪ್ರಿಯ ನಿರ್ಮಾಯ ಪ್ರಭುವಿನ ವಚನವು.

(೫) ಅಚ್ಚಪ್ರಸಾದ ನಿಚ್ಚಪ್ರಸಾದ ಸಮಯಪ್ರಸಾದ ಏಕಪ್ರಸಾದವೆಂಬ ಚತುರ್ವಿಧ ಪ್ರಸಾದದ ನಿರ್ಣಯವನರಿದು ಕೊಡಬಲ್ಲಾತನೆ ಗುರುವು, ಕೊಳಬಲ್ಲಾತನೆ ಭಕ್ತ ಈ ಭೇದವನರಿಯದೆ ನಿಚ್ಚ ನಿಚ್ಚ ಪ್ರಸಾದವೆಂದು ನೀರು ಕೂಳು ಉಂಬ ಮುಚ್ಚಟ ಮುದಿಹೊಲೆಯರುಗಳ ಮೂಗ ಕೊಯ್ಯದೆ ಮಾಣ್ಬನೆ ನಿಮ್ಮಶರಣ ಚೆನ್ನಪ್ರಿಯ ನಿರ್ಮಾಯ ಪ್ರಭುವೇ.

(೬) ಅಚ್ಚಪ್ರಸಾದವೆಂಬುದೇ ನಿಶ್ಚಲ ನಿರ್ವಯಲಕ್ಕೆ ನಾಮವು, ಅಚಲ ಅದ್ವಯ ಅಭಿನ್ನವೆಂಬುದೆ ಅಚ್ಚಪ್ರಸಾದ. ನಿಚ್ಚಪ್ರಸಾದವೆಂಬುದೆ ಶೃತಿಗುರುಸ್ವಾನುಭಾವದಿಂದರಿದು ನಿಶ್ಚಯವಾದುದೇ ನಿಚ್ಚಪ್ರಸಾದ. ಸಮಯಪ್ರಸಾದವೆಂಬುದೆ ಅಷ್ಟ ಮೂರ್ತಿಗಳ ಸಮಯವನರಿದುದೆ ಸಮಯಪ್ರಸಾದ. ಏಕಪ್ರಸಾದವೆಂಬುದೆ ಅಂಡ ಪಿಂಡ ಬ್ರಹ್ಮಾಂಡಗಳ ಸಮೂಹ ಸಮಯವಾಗಿ ತತ್ವಮಸ್ಯಾದಿ ವಾಕ್ಯಂಗಳನರಿದು ಸರ್ವಕಲ್ಪಿತ ಬ್ರಹ್ಮವೆಂದು ಅರಿದುಕೊಳ್ಳಬಲ್ಲಡೆ ಏಕಮೇವ ನದ್ವಿತೀಯವೆಂಬ ವಾಕ್ಯಕ್ಕೆ ಡೆಗುಡದೆ ಏಕ ಪ್ರಸಾದವ ಕೊಂಡವರು ಬಸವಣ್ಣ. ಚನ್ನಬಸವಣ್ಣ, ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳು ಕೊಂಡುದುದು ಏಕಪ್ರಸಾದ ಮುಂದವರಿದವರಿಗು ಬಂದ ಪ್ರಸಾದ ಹೊಂದದವರಿಗು ಇದೇ ಪ್ರಸಾದ. ಈ ಪ್ರಸಾದವಲ್ಲದೆ ನಿತ್ಯ ನಿತ್ಯ ಹಸಿವು ತೃಷೆಗೆ ಕೊಂಬುದು ಪಾದೋದಕ ಪ್ರಸಾದವಲ್ಲ. ನೀರು ಕೂಳು ಉಂಡು ಜನ್ಮ ಜನ್ಮವಾಯಿತ್ತೆಂಬು ಪಾದೋದಕ ಪ್ರಸಾದವಲ್ಲ. ಕೇಳಿರಣ್ಣ ನಿತ್ಯತೃಪ್ತಿಯೇ ಪ್ರಸಾದ.

ಪ್ರಸಾದವೆಂಬುದು ಪರಮಾನಂದ. ಈ ಭೇದವ ತಿಳಿದು ಕೊಳಬಲ್ಲಾತನೆ ಭಕ್ತ, ಕೊಡಬಲ್ಲಾತನೆ ಜಂಗಮ. ಈ ಭೇದವನರಿಯದೆ ಗುರುಲಿಂಗ ಜಂಗಮದಲ್ಲಿ ಪಾದೋದಕ ಪ್ರಸಾದವ ಕೊಳಬೇಕೆಂಬಾತ ಭಕ್ತನಲ್ಲ. ಅವ ಬದ್ಧ ಭವಿ. ಉರಿಉಂಡ ಕರ್ಪುರವು ಮರಳಿ ಸುಡುವದೇ? ಪರುಷ ಮುಟ್ಟಿದ ಲೋಹ ಹೊನ್ನದ ಮೇಲೆ ಮರಳಿ ಮುಟ್ಟಿಸುವರೇ? ಜ್ಯೋತಿ ಮುಟ್ಟಿದ ಮನೆಗೆ ಕತ್ತಲೆಯುಂಟೇ? ಪಾದೋದಕ ಪ್ರಸಾದ ಸೋಂಕಿದ ಕಾಯವು ಪ್ರಸಾದವಲ್ಲದೆ, ಪ್ರಸಾದಕ್ಕೆ ಪ್ರಸಾದವುಂಟೆ? ಚನ್ನಪ್ರಿಯ ನಿರ್ಮಾಯ ಪ್ರಭುವೇ

(೧೦) ಪ್ರಸಾದವೆಂಬುದು ನಿರ್ಮಾಯನ ಮುಖದಿಂದುದಯವಾದುದು, ಚಿಚ್ಛಕ್ತಿಯಿಂದುದಯವಾದ ಮಹಾಲಿಂಗ ರೂಪವಾಯಿತ್ತು, ಮಹಾಲಿಂಗದಿಂದ ಪ್ರಸಾದಲಿಂಗದುದ್ಭವ, ಪ್ರಸಾದಲಿಂಗದಿಂದ ಜಂಗಮ ಲಿಂಗದುದ್ಭವ, ಜಂಗಮಲಿಂಗದಿಂದ ಶಿವಲಿಂಗೋದ್ಭವ, ಶಿವಲಿಂಗದಿಂದ ಪ್ರಸಾದಲಿಂಗೋದ್ಭವ, ಮಹಾಲಿಂಗದಿಂದ ಆಚಾರಲಿಂಗೋದ್ಭವ, ಇಂತೀ ಷಡ್ವಿಧಲಿಂಗವು ಪ್ರಸಾದದಿಂದುದ್ಭವಿಸಿದವು. ಪ್ರಸಾದದಿಂದಲೇ ಜಗತ್ತು ಉದ್ಭವಿಸಿತು. ಸಾಕ್ಷಿ:—ಲಿಂಗಮಧ್ಯೆ ಜಗತ್ಸರ್ವಂ । ತ್ರೈಲೋಕ್ಯಂ ಸಚರಾಚರಂ ॥ ಲಿಂಗಬಾಹ್ಯಾತ್ ಪರಂ ನಾಸ್ತಿ । ತಸ್ಮಾತ್ ಲಿಂಗಂ ಪ್ರಪೂಜಯೇತ್ ॥ ಸರ್ವಸಚರಾಚರವೇ ಪ್ರಸಾದರೂಪವಾಯಿತ್ತು. ಅನಂತ ಕೋಟಿ ಬ್ರಹ್ಮಾಂಡಗಳಿಗೆ ಪ್ರಸಾದವೇ ಕಾಯ ಜೀವ ಪ್ರಾಣವಾಯಿತ್ತು ಕಾಯವೇ ಇಷ್ಟಲಿಂಗವಾಯಿತ್ತು, ಜೀವವೇ ಪ್ರಾಣಲಿಂಗವಾಯಿತ್ತು, ಭಾವವೇ ತೃಪ್ತಿಲಿಂಗವಾಯಿತ್ತು. ಪೃಥ್ವಿ ಅಪ್ಪುಗಳೆರಡೇ ಕಾಯವಾಯಿತ್ತು ಅಗ್ನಿ ವಾಯುಗಳೆರಡೇ ಪ್ರಾಣವಾಯಿತ್ತು, ಆಕಾರ ಓಂಕಾರವೇ ಭಾವವಾಯಿತ್ತು. ಈ ಪಂಚತತ್ವ ಪ್ರಸಾದವೆನಿಸಿ ಪ್ರಣಮವು ಹೀಗೆ ಕಾಯ, ಜೀವ, ಪ್ರಾಣಪ್ರಸಾದವಾಯಿತ್ತೆಂದು ಚನ್ನಪ್ರಿಯ ನಿರ್ಮಾಯ ಪ್ರಭುವೇ.

(೧೧) ಪ್ರಸಾದದಿಂದ ತೋರಿತ್ತು ಷಡ್ವಿಧ ಸ್ಥಲವು. ಪ್ರಸಾದದಿಂದ ತೋರಿತ್ತು. ಷಡ್ವಿಧ ಚಕ್ರಂಗಳು. ಷಡ್ವಿಧ ಪ್ರಸಾದ ಷಡ್ವಿಧ ಬೀಜಾಕ್ಷರವೇ ಷಡ್ವಿಧ ಲಿಂಗವಾಯಿತ್ತು. ಷಡ್ವಿಧ ಹಸ್ತವೇ ಷಡ್ವಿಧ ಕಾಲಗಳೇ ಪ್ರಸಾದಕಾಲ ಎನಿಸಿತ್ತು. ಷಡ್ವಿಧ ಸಾದಾಖ್ಯವೇ ಷಡ್ವಿಧ ಮುಖವೆನಿಸಿತ್ತು. ಷಡ್ವಿಧ ದ್ರವ್ಯ ಷಡ್ವಿಧ ಪ್ರಸಾದ, ಷಡ್ವಿಧ ಪ್ರಸಾದವೇ ಷಡ್ವಿಧ

ತೃಪ್ತಿಯೆನಿಸಿತ್ತು. ಷಡ್ವಿಧ ತೃಪ್ತಿಯನೇ ( ) ದಾತ ನಿಮ್ಮ ಚನ್ನ ಪ್ರಿಯ ನಿರ್ವಾಣಯ ಪ್ರಭುವೇ.

(೧೨) ಪ್ರಸಾದವಕೊಂಡ ಶರಣನ ಸರ್ವಾಂಗವೆಲ್ಲ ಪ್ರಸಾದವು ತಾನಾದವು. ಕಾರಣ ಅಸ್ತಿ ಅನುಪಮವಾಯಿತ್ತು. ಮಾಂಸ ಪಿಂಡ ಮಂತ್ರರೂಪವಾಯಿತ್ತು. ಚರ್ಮ ಚಿದ್ರೂಪವಾಯಿತ್ತು. ನಾಡಿ ನಿರಂಜನವಾಯಿತ್ತು. ರೋಮ ಓಂ ರೂಪವಾಯಿತ್ತು. ಇಂತೀ ಪಂಚಭೂತ ಕಾಯ ಪ್ರಸಾದ ಕಾಯುವಾಯಿತ್ತು. ಮಾಂಸಪಿಂಡ ಮಂತ್ರಪಿಂಡವಾಯಿತ್ತು. ವಾಯು ಪ್ರಾಣಲಿಂಗ ಪ್ರಾಣವಾಯಿತ್ತು. ನರರೂಪು ಹರರೂಪುವಾಯಿತ್ತು. ಹರ ರೂಪು ಗುರುಚರಪ್ರಸಾದವಾಯಿತ್ತು. ದೇವಭಕ್ತನಾದುದೇ ಪ್ರಸಾದ. ಚನ್ನಪ್ರಿಯ ನಿರ್ವಾಣಯ ಪ್ರಭುವೇ

ಇದು ಅಲ್ಲದೆ ಶ್ರೀಮದನಾದಿ ಅಲ್ಲಮಪ್ರಭುದೇವನು ತೇರದಾಳದಲ್ಲಿ ನಿರ್ವಯಲವಾಗುವ ಸಮಯದಲ್ಲಿ ತನ್ನ ಕೆಲವು ಕುರುಹುಗಳನ್ನು ನನಗೆ ಕೊಟ್ಟರೆ ಅವುಗಳನ್ನು ನಾನು ವಂಶಪರಂಪರೆಯಾಗಿ ಪೂಜಿಸಿಕೊಂಡಿರುವೆನು ಎಂದು ಬೇಡಿಕೊಂಡವನೇ ಈ ಚನ್ನಪ್ಪದೇವನು. ಶ್ರೀಪ್ರಭುದೇವನು ಬೈಲಾದ ತರುವಾಯ ಆ ಸ್ಥಲದಲ್ಲಿ ಒಂದು ಮಠವನ್ನು ಕಟ್ಟಿ ಅದರಲ್ಲಿ ಶೂನ್ಯಸಿಂಹಾಸನವೆಂಬ ಗದ್ದುಗೆಯನ್ನು ಸ್ಥಾಪಿಸಿ ಅದರ ಮೇಲೆ ಶ್ರೀಪ್ರಭುದೇವನು ಆಶೀರ್ವಾದವೆಂದು ತನ್ನ ಕೈಯೊಳಗಿನ ಕಮಂಡಲವಾದ ಮಗೆಯನ್ನು ಕೊಟ್ಟದ್ದನ್ನು ಇಟ್ಟು ಅದರ ಪೂಜೆಯನ್ನು ಈ ಹೊತ್ತಿಗೂ ಇದೇ ಚನ್ನಪ್ಪನ ವಂಶಜರು ಮಾಡುತ್ತಿರುವರು.

ಸುಮಾರು ೮೦೦ ವರ್ಷಗಳ ವರೆಗೆ ಈ ವಂಶವು ಅಖಂಡವಾಗಿ ಉಳಿದದ್ದನ್ನು ಕೇಳಿ ವಾಚಕರಿಗೆ ವಿಶೇಷ ಆಶ್ಚರ್ಯವೆನಿಸುವ ಸಂಭವವದೆ. ಯಾಕಂದರೆ ಇಂಥ ಮನೆತನಗಳು ಪ್ರಪಂಚದಲ್ಲೆಲ್ಲ ಬಹಳೇ ವಿರಳವಾಗಿ ಸಿಕ್ಕುತ್ತವೆ ಈ ವಂಶವು ಹೀಗೆ ಅವ್ಯಾಹತವಾಗಿ ಸಾಗಿಬರಲಿಕ್ಕೆ ಮುಖ್ಯ ಕಾರಣಗಳು ಎರಡು :—(೧) ಶ್ರೀಪ್ರಭುದೇವನು ತನ್ನ ನಿರ್ವಾಣಸಮಯಕ್ಕೆ ಈ ಚನ್ನಪ್ಪನ ಉಭಯ ಮಕ್ಕಳನ್ನು ಹತ್ತರ ಕರೆದು ಅವರ ಮಸ್ತಕಗಳ ಮೇಲೆ ತನ್ನ ವರದಹಸ್ತವನ್ನಿಟ್ಟುಕೊಟ್ಟಂಥ ಬಲವತ್ತರವಾದ ಆಶೀರ್ವಾದವು. (೨) ಶ್ರೀಚನ್ನಪ್ಪದೇವನು ಶ್ರೀಮದನಾದಿ ಅಲ್ಲಮಪ್ರಭುದೇವನ ನಿರ್ವಯಲ ಕಾಲಕ್ಕೆ ಬೇಡಿಕೊಂಡಂಥ ಆತನ ಬಲವಾದ ಇಚ್ಛಾಶಕ್ತಿಯು ( strong will ).

ಶ್ರೀಪ್ರಭುದೇವನು ತೇರದಾಳದಲ್ಲಿ ಐಕ್ಯವಾದ ಕೂಡಲೆ ಶ್ರೀಚನ್ನಪ್ಪದೇವನಾದರೂ ಅದೇ ಕಾಲದಲ್ಲಿ ಅದೇ ಸ್ಥಳದಲ್ಲಿ ದೇಹವನ್ನು ಇಟ್ಟನು. ಆ ಮೇಲೆ ಚನ್ನಪ್ಪದೇವನ ಇಬ್ಬರು ಮಕ್ಕಳು ಮತ್ತು ಅಳಿಯನಾದ ಕರಿಬಸವದೇವನು ಶ್ರೀಮಂತ ಒಂಟಿಮುರಿ ಹಾಗೂ ಹನಗಂಡಿ ದೇಸಾಯರ ಮತ್ತು ಇತರ ಭಕ್ತ ಮಹೇಶ್ವರರ ಸಹಾಯದಿಂದ ಕೂಡಲೆ ಆ ಸ್ಥಳದಲ್ಲಿ ಒಂದು ಮಠವನ್ನು ಕಟ್ಟಿಸಿ ಅದರಲ್ಲಿ ಶೂನ್ಯಸಿಂಹಾಸನವೆಂಬ ಗದ್ದುಗೆಯನ್ನು ಸ್ಥಾಪಿಸಿ ಅದರ ಹಿಂಭಾಗದಲ್ಲಿ ಶ್ರೀಚನ್ನಪ್ಪದೇವನ ಗದ್ದುಗೆಯನ್ನು ನಿರ್ಮಿಸಿ ಅವುಗಳ ಪೂಜೋತ್ಸವಕ್ಕೆ ಅಂದಿನಿಂದ ಪ್ರಾರಂಭಿಸಿದರು. ಆ ಚನ್ನಪ್ಪದೇವನ ಮಕ್ಕಳು ತಮ್ಮ ಸಲುವಾಗಿ ಬೃಹನ್ಮಠದ ಹೊರಗಿನ ಭಾಗದಲ್ಲಿ ಮನೆಗಳನ್ನು ಕಟ್ಟಿಸಿದರು. ಶ್ರೀಪ್ರಭುದೇವನ ಆಜ್ಞೆಯಂತೆ ಶ್ರೀಕರಿಬಸವದೇವನಿಗೆ ತಮ್ಮ ತಂಗಿಯನ್ನು ಕೊಟ್ಟು ಲಗ್ನ ಮಾಡಿ ಅವನ ಸಲುವಾಗಿ ಒಂದು ಮಠವನ್ನು ಕಟ್ಟಿಸಿಕೊಟ್ಟರು. ಈ ಕರಿಬಸವದೇವನು ಕೆಲವು ಕಾಲ ಸಂಸಾರ ಸುಖವನ್ನನುಭವಿಸಿ ಆ ಮೇಲೆ ಕುಟುಂಬ ಸಹಿತವಾಗಿ ತನ್ನ ಮಠದಲ್ಲಿ ಸಮಾಧಿಸ್ಥನಾದನು. ಈ ಮಠವು ಈಗ್ಯೂ ಆ ಚನ್ನಪ್ಪದೇವನ ವಂಶಜರ ಕಡೆಗೆ ಇರುತ್ತದೆ. ಶ್ರೀಪ್ರಭುದೇವನ ಬೃಹನ್ಮಠವು ಇರುವ ಸ್ಥಾನಕ್ಕೆ "ಪುರುವರ" ಎಂದೆನ್ನುವರು. ಮಹಾರಾಷ್ಟ್ರ ಜ್ಞಾನಕೋಶ ಭಾಗ ೧೬-೧೭, ಪ. ಅಕ್ಷರ, ಪುಟ ೧೫೪ರಲ್ಲಿ "ಪುರು ಎಂದರೆ ಒಂದು ವೈದಿಕ ರಾಷ್ಟ್ರ" ಎಂದು ಹೇಳಿರುವದು. ಪುರುವರ ಎಂದರೆ ವೈದಿಕ ರಾಷ್ಟ್ರಗಳಲ್ಲಿ ಶ್ರೇಷ್ಠವೆಂದು ಅರ್ಥವಾಗುತ್ತದೆ. ಒಟ್ಟಿನ ಮೇಲೆ ನೋಡಲಾಗಿ ಪುರುವರ ಅಂದರೆ ಯಾವ ಠಾವಿನಲ್ಲಿ ಕುಲೀನ ಹಾಗೂ ಸದಾಚಾರವುಳ್ಳ ಜಂಗಮರ ವಾಸ ವಿರುವದೋ ಅಂಥಾ ಸ್ಥಾನಕ್ಕೆ ಪುರುವರ ಹಾಗು ಬ್ರಾಹ್ಮಣರು ಇರುವಸ್ಥಾನಕ್ಕೆ ಅಗ್ರಹಾರ ಎಂದೆನ್ನುವರು. ಕ್ರಮೇಣ ಈ ವಂಶದಲ್ಲಿ ಅನೇಕ ಜನರು ನ್ಯಾಯ, ವ್ಯಾಕರಣ, ಮಿಮಾಂಸಾದಿ ಷಟ್‌ಶಾಸ್ತ್ರಗಳಲ್ಲಿ ಬಹಳ ಪ್ರವೀಣರಾದರು ಇದರ ಸತ್ಯತೆಗಾಗಿ ಸದ್ಯಕ್ಕೆ ಇವರ ವಂಶಜರಲ್ಲಿರುವ ಉದ್ಗ್ರಂಥಗಳೊಳಗಿನ ಕೆಲವುಗಳ ಹೆಸರುಗಳನ್ನು ಇಲ್ಲಿ ಕೊಟ್ಟರೆ ಓದುಗರಿಗೆ ಮನವರಿಕೆ ಯಾಗುವದು. ಅವು ಯಾವವೆಂದರೆ:—(೧) ನಂದೀನಾಗರೀಲಿಪಿಯಲ್ಲಿ ಬರೆದ ಕೇಶವಮಿಶ್ರ ವಿರಚಿತಾ ತರ್ಕಭಾಷಾ, (೨) ಗ್ರಂಥಲಿಪಿಯಲ್ಲಿ ಬರೆದ ಗುರುನಂಜೇಶನಿಂದ ರಚಿತವಾದ ಮಣಿಮಾಲಾ ಸ್ತೋತ್ರಭಾಷ್ಯ ಮತ್ತು

(೩) ಶಿವತತ್ವ ವಿವೇಕ, (೪) ನಂದೀನಾಗರೀ ಲಿಪಿಯಲ್ಲಿ ಬರೆದ ಶ್ರೀಕಂಠನಾಥಪರಾವತಾರ ಶ್ರೀಮದಭಿನವತಟಾಕಪದ್ಮರಸಾರಾಧ್ಯಸೂನು ನಾವಿಶ್ವಾರಾಧ್ಯೇನ ವಿರಚಿತಾಯಾಂ ವಿದ್ಯಾರ್ಣವಪದಾರ್ಥಪರೀಕ್ಷಾನಾಮಂ ಪ್ರಥಮಂ ಪ್ರಕರಣಮಂ ಮತ್ತು ಅದೇ ಲಿಪಿಯಲ್ಲಿ ಬರೆದ ಪಂಚರಾತ್ರಮತನಿರಾಕರಣಂ, (೬) ವೈಶೇಷಿಕಮತನಿರಾಕರಣಂ, (೭) ಬೌದ್ಧಮತನಿರಾಕರಣಂ, (೮) ಕನ್ನಡ ಟೀಕೆಯಿಂದೊಡಗೂಡಿದ ಸಂಸ್ಕೃತ ಶಿವಾಧಿಕ್ಯ ಶಿಖಾಮಣಿ ಎಂಬ ಚೋಳರೇಣುಕಸಂವಾದರೂಪವಾದ ಗ್ರಂಥ ಇವುಗಳೊಳಗಿನ ಹಲವು ಲಿಪಿಗಳಿಂದ ಇವರಿಗೆ ಬಹಳ ಭಾಷೆಗಳಲ್ಲಿ ಚನ್ನಾಗಿ ಗತಿ ಇತ್ತೆಂದು ಕಂಡು ಬರುತ್ತದೆ ಮತ್ತು ಕನ್ನಡದಲ್ಲಿ ಬರೆದ ಶಿವಗಣಪ್ರಸಾದಿ ಮಹಾದೇವಯ್ಯಗಳ ಗುಮ್ಮಳಾಪುರ ಸಿದ್ಧಲಿಂಗದೇವರ ಹಾಗು ಗೂಳೂರ ಸಿದ್ಧವೀರದೇವರ ಶೂನ್ಯ ಸಂಪಾದನೆಗಳು ಶ್ರೀಪ್ರಭುದೇವರ ಷಟ್‌ಸ್ಥಲವಚನ, ಮಗ್ಗೆಯ ಮಾಯಿದೇವನ ಏಕೋತ್ತರ ಷಟ್‌ಸ್ಥಲದ ವಾರ್ದಿಕ ಷಟ್ಪದಿ, ಹಾಗು ಪಾಲ್ಕುರಿಕೆ ಸೋಮರಾಧ್ಯರ ಶೀಲಸಂಪಾದನೆ, ಮುಪ್ಪಿನ ಷಡಕ್ಷರದೇವನ ವಚನ ಮತ್ತು ಅನೇಕ ಶತಕಗಳು ದೊರೆಯುತ್ತವೆ.

ಇವರಲ್ಲಿ ಎರಡನೇ ಚನ್ನಪ್ಪನೆಂಬೊಬ್ಬನು ಶ್ರೀಮದನಾದಿ ಅಲ್ಲಮಪ್ರಭುದೇವನನ್ನು ೧೧೦೦ ಪದ್ಯಗಳಿಂದ ಕೊಂಡಾಡಿರುವನು. ಅವುಗಳಲ್ಲಿ ಸಿಕ್ಕಷ್ಟನ್ನು ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ಪುಷ್ಪಗಳಲ್ಲಿ ಮುದ್ರಿಸಿರುವೆವು. ಈ ಪದ್ಯಗಳು ಬಹಳ ಸುಲಲಿತವಾಗಿಯೂ ಹೃದಯಂಗಮವಾಗಿಯೂ ಇರುತ್ತವೆ.

ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ಪ್ರಥಮಪುಷ್ಪದ ೧೪ನೆಯ ಪುಟದಲ್ಲಿಯ ೩೮ನೆಯ ಪದ್ಯದ ೨ನೆಯ ನುಡಿಯಲ್ಲಿ "ಕಲಿಯುಗದೊಳು ತಾನು ದಲದಂಕನಾಗಿರ್ದು । ಬಲುಶಾಸ್ತ್ರದೊಳಗೆಲ್ಲ ಒಲಿವೆಯೊಳು ಗುರುಕರುಣವ ಪಡೆದಿದ್ದ । ಸಲೆ ಪುರಾಣ ಚನ್ನಪ್ಪನ ಸದನದ ದಾಸಿನಾ ॥ ಎಂದು ಹನಗಂಡಿಯು ದೊರೆಯಾದ ಮಗಿಯ ನರೇಂದ್ರ ಕವಿಯು ಶ್ರೀಚನ್ನಪ್ಪನವರನ್ನು ಕೊಂಡಾಡಿರುವದರಿಂದ ಈ ಚನ್ನಶ್ರೀಪ್ರಭುಕವಿಯು ಷಟ್‌ಶಾಸ್ತ್ರಪಾಂರಗತನೂ ವೀರಶೈವನೂ ತೇರದಾಳದ ನಿವಾಸಿಯೂ ಶ್ರೀಪ್ರಭುಭಕ್ತನೂ ಹಾಗು ಮಗಿಯ ನರೇಂದ್ರ ಕವಿಯ ಸಮಕಾಲಿಕನೂ ಅಂದರೆ ಕ್ರಿ. ಶ. ೧೪೩೦ರಲ್ಲಿ ಇದ್ದವನೆಂದೂ

ಸ್ಪಷ್ಟವಾಗಿ ಕಂಡು ಬರುತ್ತದೆ. ಈ ಕವಿಯ ಪದ್ಯಗಳು ಸಾಧಾರಣವಾಗಿ ಶ್ರೇಷ್ಠ ತರಗತಿಯವು ಇರುತ್ತವೆ. ಸಂಸ್ಕೃತದಲ್ಲಿ ಕೆಲವು ಪದ್ಯಗಳಿರುವದರಿಂದ ಈತನು ಕನ್ನಡ ಹಾಗು ಸಂಸ್ಕೃತ ಹೀಗೆ ಎರಡೂ ಭಾಷೆಗಳನ್ನು ಅರಿತವನಿದ್ದನೆಂದು ಕಂಡು ಬರುತ್ತದೆ. ಈ ಕವಿಯ ಈಗಿನ ಎಷ್ಟೋ ಪದ್ಯಗಳು ರಾಧೆಯು ಶ್ರೀಕೃಷ್ಣನನ್ನು ಉದ್ದೇಶಿಸಿ ನುಡಿದಂತೆ ಕಾಮಾತುರಳಾದ ಮಾಯಾದೇವಿಯು ಶ್ರೀ ಶಿವನ ಪರಾವತಾರನಾದ ಶ್ರೀಮದನಾದಿ ಅಲ್ಲಮಪ್ರಭುವನ್ನು ಮೋಹಿಸಿ ನುಡಿದಂತೆ ಭಾವವುಳ್ಳವುಗಳಾಗಿವೆ.

ಇದೇ ಮನೆತನದಲ್ಲಿ ಈ ಚನ್ನಶ್ರೀಪ್ರಭುಕವಿಯ ಮರಿಮಗನಾದ ಮುಗಿಯಯ್ಯನೆಂಬವನು ೧೭ನೆಯ ಶತಮಾನದಲ್ಲಿ ಕಿತ್ತೂರ ಸಂಸ್ಥಾನದಲ್ಲಿ ಪಂಡಿತನಾಗಿದ್ದನು. ಇವನಿಗೆ ಓದುವ ಮುಗಿಯಯ್ಯನೆಂದು ಅನ್ನುತ್ತಿದ್ದರು. ಇವನು ಕ್ರಿ. ಶ. ೧೬೯ ರಲ್ಲಿ ಚನ್ನಮಲ್ಲೇಶ ಕವಿಯ ದೀಪದ ಕಲಿಯರ ಕಾವ್ಯದ ಹಾಗು ಸಿದ್ಧಮಲ್ಲೇಶ ಕವಿಯ ವೀರಸಂಗಯ್ಯನ ಚರಿತೆಯ ಪ್ರತಿಗಳನ್ನು ತನ್ನ ಹಸ್ತಾಕ್ಷರದಿಂದ ಬರೆದಿಟ್ಟವುಗಳು ನಮ್ಮ ಹತ್ತಿರ ಇರುವವು. ವೀರಸಂಗಯ್ಯನ ಚರಿತೆಯ ಕಡೆಯ ಭಾಗದಲ್ಲಿ "ಶಾಲಿವಾಹನ ಶಕೆ ೧೬೧೭ನೆಯ ಯುವನಾಮಸಂವತ್ಸರದ ಭಾದ್ರಪದ ಬಹುಳ ಕೃಷ್ಣಪಕ್ಷ ಪುಷ್ಯ ನಕ್ಷತ್ರವು ಸೋಮವಾರ ೯ ತಾಸಿನೊಳು ಈ ಪುಸ್ತಕವು ಮುಗಿಯಿತು. ಈ ಪುಸ್ತಕ ಬರೆದವನಾರೆಂದರೆ ತೇರದಾಳದ ಪ್ರಭುವಿನ ವಾಲೈಸುವ ಚನ್ನಪ್ಪನ ಉದರದಿ ಜನಿಸಿದಂಥ ಮುಗಿಯಯ್ಯನು" ಎಂದು ಬರೆದಿದೆ. ಇದರಂತೆ ಇನ್ನೊಬ್ಬನು ಚಾಮರಸನ ಪ್ರಭುಲಿಂಗಲೀಲೆಯನ್ನೂ ಹಾಗು ಮತ್ತೊಬ್ಬನು ಎಳಂದೂರ ಹರೀಶ್ವರನ ಪ್ರಭುದೇವರ ಪುರಾಣವನ್ನೂ ಬರೆದಿರುವನು. ಹೀಗೆ ತಾವು ಗ್ರಂಥಗಳನ್ನು ಬರೆಯುತ್ತಿದ್ದದ್ದಲ್ಲದೆ ಬೇರೆಯವರ ಕಡೆಯಿಂದ ಬರೆಸುತ್ತಿದ್ದರು. ಉದಾಹರಣ :—ಮುಕ್ತಪುರಮಠಾಧೀಶ ಗುರುಸಂಚೇಶನ ಶಿಷ್ಯನಾದ ಶ್ರೀರಂಗಪಟ್ಟಣದ ಸಿದ್ಧಲಿಂಗದೇವನ ಕಡೆಯಿಂದ ಸೌಮ್ಯ ಸಂವತ್ಸರದ ಮಾಘ ಶುದ್ಧ ಬುಧವಾರ ದಿವಸ ಬ್ರಹ್ಮೋತ್ತರ ಖಂಡವನ್ನು ಬರೆಯಿಸಿ ಮುಗಿಸಿರುವರು. ಮತ್ತು ಮುಗಿಯಪ್ಪನ ಸುಪುತ್ರನಾದ ಚನ್ನಪ್ಪಯ್ಯನೆಂಬವನು ಸುಳ್ಳದ ಮೊಣಸಗಿಮಠದ ಮುಪ್ಪಯ್ಯನ ಕಡೆಯಿಂದ ಪ್ರಭುದೇವರ ಗುರುಬೋಧೆ ಎಂಬ ಗ್ರಂಥವನ್ನು ಕಾರ್ತಿಕ ಮಾಸದ ನವಮಿ ಉತ್ತರಾ ನಕ್ಷತ್ರ ಮಂಗಳವಾರ ದಿವಸ ಬರೆಯಿಸಿ ಮುಗಿಸಿರುವನು. ಇದು ಶಾಲಿವಾಹನ ಶಕೆ ೧೭೧೨

ಸಾಧಾರಣ ನಾಮ ಸಂವತ್ಸರ ಅಂದರೆ ತಾರೀಖು ೩೦ ಮಾಹೆ ನವಂಬರ ಸನ್ನ ೧೭೯೦ ಇಸ್ವಿ ಆಗುವದು. ಮೈಸೂರ ಸಂಸ್ಥಾನದೊಳಗಣ ಶ್ರೀರಂಗಪಟ್ಟಣವೆತ್ತ ಮತ್ತು ಉತ್ತರ ಕರ್ನಾಟಕದೊಳಗಣ ತೇರದಾಳ ವೆತ್ತ? ಇದರ ಮೇಲಿಂದ ಈ ವಂಶದವರ ತೀವ್ರತರವಾದ ವಾಂಙ್ಮಯ ಪ್ರೇಮವೂ ಹಾಗು ಅನೇಕ ವಿಷಯಗಳ ಸಂಗ್ರಹದ ಲಾಲಸೆಯೂ ಎಷ್ಟಿತ್ತೆಂಬುವದು ಒಡೆದು ಕಾಣಿಸುತ್ತದೆ.

ಈ ವಂಶದ ಚನ್ನಶ್ರೀಪ್ರಭು ಕವಿಯು ಶ್ರೀಕೊಟ್ಟೂರಬಸವೇಶ್ವರ ದೇವರ ದಟ್ಟಿ ಪೀತಾಂಬರ ಮೊದಲಾದ ಉಡಿಗೆತೊಡಿಗೆಗಳನ್ನು ಹಾಗು ರಾಜಪಟ್ಟದಾನೆಯನ್ನೂ ಚರಕೆ ಇತ್ತ ಮೊದಲಾದ ಪವಾಡಗಳನ್ನೂ ತನ್ನ ೧೨ನೆಯ ಪದ್ಯದಲ್ಲಿ ಹೇಳಿ ' ಕೊಟ್ಟೂರಿಂದ ಬಂದ ಸ್ಫುಟವಿಭೂತಿ ಬಸವನ ನಿಟ್ಟಿಸಿ ಕಂಡೆ '' ಎಂದು ಹೇಳುವದರಿಂದ ೧೫ನೆಯ ಶತಮಾನದಲ್ಲಿ ಕೊಟ್ಟೂರ ಬಸವೇಶ್ವರದೇವರು ಶ್ರೀಪ್ರಭುವಿನ ಪುಣ್ಯಸ್ಥಾನದ ದರ್ಶನಾರ್ಥವಾಗಿ ತೇರದಾಳಕ್ಕೆ ಬಂದಿದ್ದರೆಂದು ಕಂಡು ಬರುತ್ತದೆ.

ಇದೇ ವಂಶದವರು ಈ ಹೊತ್ತಿನವರೆಗೂ ತೇರದಾಳದ ಶ್ರೀಪ್ರಭು ದೇವರ ಬೃಹನ್ಮಠಕ್ಕೆ ಒಡೆಯರಾಗಿರುವರು. ಇದರಲ್ಲಿ ೮ ಮನೆತನಗಳಾಗಿ ರುವವು. ಇವರಲ್ಲಿ ಒಬ್ಬನ ವಿಷಯವಾಗಿ ಹಿಂದಿನ ಕಾಗದ ಪತ್ರಗಳಲ್ಲಿ '' ಶ್ರೀಮತ್ ಸಚ್ಚಿದಾನಂದ ನಿತ್ಯ ಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪಾಯಮಾನರಾದಂಥ ರಾಜಮಾನ್ಯ ರಾಜಶ್ರೀ ತೇರದಾಳದಲ್ಲಿರುವ ಪ್ರಭುಸ್ವಾಮಿಮಠದ ಪರಪ್ಪಸ್ವಾಮಿಯವರ ಪಾದಕ್ಕೆ '' ಎಂದು ಉಲ್ಲೇಖ ವದೆ.

ಕೊಲ್ಹಾಪುರದ ಶ್ರೀಮನ್ ಮಹಾರಾಜ ಸರಕಾರದವರ ಪೂರ್ವಜ ರಾದ ಶ್ರೀ ಸಂಭಾಜಿ ಮಹಾರಾಜರವರು ತಮ್ಮ ಮಹಾ ಮಾತೋಶ್ರೀಗ ಳಾದ ಮಹಾರಾಣಿಯವರೂ ಹಾಗೂ ರಾಜಕಾರ್ಯಧುರಂಧರ ವಿಶ್ವಾಸ ನಿಧಿ ರಾಜಮಾನ್ಯ ರಾಜಶ್ರೀ ರಾಮಚಂದ್ರ ಪಂಡಿತರೂ ಮೊದಲಾದವ ರನ್ನು ಕೂಡಿಕೊಂಡು ಶ್ರೀಮದನಾದಿ ಅಲ್ಲಮಪ್ರಭುದೇವರ ಶೂನ್ಯ ಪೀಠ ವೆಂಬ ಗದ್ದುಗೆಯ ದರ್ಶನಾರ್ಥವಾಗಿ ತೇರದಾಳಕ್ಕೆ ಬಂದು ಅಲ್ಲಿ ಮುಕ್ಕಾಮು ಮಾಡಿ ದರ್ಶನಾಶೀರ್ವಾದವನ್ನು ಪಡೆದು ಸಂತುಷ್ಟರಾಗಿ ಇದು 'ಬಲು ದೊಡ್ಡ ಜಾಗೃತಸ್ಥಲವೆಂದು ಬಗೆದು ಬೃಹನ್ಮಠಕ್ಕೆ ಅರ್ಧ ಚಾಹೂರ

ಅಂದರೆ ಸುಮಾರು ೮೦ ಎಕರೆ ಭೂಮಿಯನ್ನು ಸೂರು ಸಬ್ ಅಶರ್ ಮಯಾ ಅಲಫ್ ಅಂದರೆ ಶಾಲಿವಾಹನ ಶಕೆ ೧೬೩೮ ದುರ್ಮುಖ ನಾಮಸಂವತ್ಸರ ಶ್ರಾವಣ ವದ್ಯ ೧ ಮಂಗಳವಾರ ಅಂದರೆ ತಾರೀಖು ೨೪ ಜುಲೈ ಸನ್ ೧೭೧೬ನೆಯ ಇಸವಿಯ ದಿವಸ ಇನಾಮವಾಗಿ ಕೊಟ್ಟು ಆ ಬಗ್ಗೆ ಮುತ್ತ್ಯಾ ಚನ್ನಪ್ಪದೇವನ ವಂಶಜರೊಳಗಿನ ಬೃಹನ್ಮಠದ ಭೋಗವಟಿಯಾದ ಗದಿಗೆಪ್ಪಯ್ಯನೆಂಬವನ ಹೆಸರಿನಿಂದ ಆಜ್ಞಾಪತ್ರವನ್ನು ಕೊಟ್ಟಿರುವರು. ಇವನು ಮುಂದೆ ಆ ಆಜ್ಞಾಪತ್ರಾನುಸಾರವಾಗಿ ಕೊಲ್ಹಾಪುರಕ್ಕೆ ಹೋಗಿ ಹುಜೂರಿಗೆ ಅರಿಕೆ ಮಾಡಿಕೊಳ್ಳಲು ಕ್ಷತ್ರಿಯ ಕುಲಾವತಂಸ ಶ್ರೀ ರಾಜಾ ಶಂಭುಛತ್ರಪತಿ ಸರಕಾರ ಕರವೀರ ಇವರು ಶಿವ ರಾಜಾಭಿಷೇಕ ಶಕೆ ೪೩ ದುರ್ಮುಖನಾಮ ಸಂವತ್ಸರ ಮಾರ್ಗಶೀರ್ಷ ಶುದ್ಧ ೩ ಇಂದುವಾಸರ ಅಂದರೆ ತಾರೀಖು ೫ ನವ್ಹೆಂಬರ ಸನ್ ೧೭೧೬ ನೆಯ ಇಸವಿಯ ದಿವಸ ತಾವು ಮೊದಲು ದಾನವಾಗಿ ಕೊಟ್ಟ ಭೂಮಿಯ ಬಗ್ಗೆ ಸನದನ್ನು ಹಾಕಿಕೊಟ್ಟರು. ಆದರಲ್ಲಿ ಆವರು ಶ್ರೀಪ್ರಭುದೇವರ ಬೃಹನ್ಮಠದ ಈ ಜಂಗಮರಿಗೆ ಕುಲಬಾಬುಗಳನ್ನು ಹಾಗೂ ಕುಲಕಾನೂನಗಳನ್ನು ಕೊಡುವದಲ್ಲದೆ ಅವರನ್ನು ಹಕ್ಕದಾರರನ್ನಾಗಿಯೂ ಇನಾಮದಾರರನ್ನಾಗಿಯೂ ಮಾಡಿದರು. ಅಂದಿನಿಂದ ಈ ಜಂಗಮರಿಗೆ ಅಖಂಡಿತ ಲಕ್ಷ್ಮೀ ಅಲಂಕೃತರೆಂದು ಸಂಬೋಧಿಸಿ ಜನರು ಒಕ್ಕಣಿಕೆಯನ್ನು ಬರೆಯಹತ್ತಿದರು. ಉದಾಹರಣೆಗಾಗಿ :—

ಕೊಲ್ಹಾಪುರದವರ ಮಾಂಡಲೀಕರಾದ ಶ್ರೀಮಂತ ರಾಣೋಜಿ ರಾಜೇ ಘೋರಪಡೆ ಸೇನಾಪತಿ ಎಂಬ ಸಂಸ್ಥಾನಿಕರೊಬ್ಬರು ಸುಮಾ ಸಮಾನ ಸಲ್ಲಾಸೀನ ಮಯಾ ಅಲಫ್ ಅಂದರೆ ಶಾಲಿವಾಹನ ಶಕೆ ೧೬೫೯ ಪಿಂಗಳ ನಾಮ ಸಂವತ್ಸರ ಶ್ರಾವಣ ಶುದ್ಧ ೧೨ ಬುಧವಾರ ಅಂದರೆ ತಾರೀಖು ೨೭ ಜುಲೈ ಸನ್ ೧೭೩೭ನೆಯ ಇಸವಿಯ ದಿವಸ ಶ್ರೀಮದನಾದಿ ಅಲ್ಲಮಪ್ರಭುದೇವನ ಬೃಹನ್ಮಠಕ್ಕೆ ಪ್ರತಿವರುಷಕ್ಕೆ ೨೫ ರೂಪಾಯಿಗಳನ್ನು ಕಾಣಿಕೆಯಾಗಿ ಕೊಡುತ್ತೇವೆಂದು ಸನದನ್ನು ಹಾಕಿಕೊಟ್ಟರು. ಆ ಸನದಿನಲ್ಲಿ ತಮ್ಮ ವರಿಷ್ಠ ಸರಕಾರದವರಾದ ಕೊಲ್ಹಾಪುರದ ಮಹಾರಾಜರವರು ಈ ಜಂಗಮರನ್ನು ಇನಾಮದಾರರನ್ನಾಗಿ ಮಾಡಿರುವದರಿಂದ ಇವರೂ ತಮ್ಮ ಸಮಾನ ಮರ್ಯಾದೆಯುಳ್ಳವರಾದರೆಂದು ಬಗೆದು ಇವರೊಳಗಿನ ಅಲ್ಲಯ್ಯನೆಂಬವನಿಗೆ ಅಖಂಡಿತ ಲಕ್ಷ್ಮೀ ಅಲಂಕೃತನೆಂದು ಸಂಬೋಧಿಸಿ ತಮಗೆ

ಸ್ನೇಹಾಂಕಿತರೆಂದು ಅಂದುಕೊಂಡಿರುವರು. ಈ ಕಾಣಿಕೆಯ ಉತ್ಪನ್ನವು ಈ ಜಂಗಮರ ಗಂಡುವಂಶದ ಹೊರ್ತಾಗಿ ಬೇರೆಯವರಿಗೆ ಹೋಗಕೂಡದೆಂದು ಆ ಸನದಿನಲ್ಲಿ ನಿರ್ಬಂಧನೆಯನ್ನು ಹಾಕಿರುವರು. ಹಿಂದಕ್ಕೆ ಈ ಮಠದ ಸ್ವಾಮಿಗಳಲ್ಲಿ ಏನಾದರೊಂದು ವ್ಯಾಜ್ಯವು ಉಂಟಾದರೆ ಅದನ್ನು ಶ್ರೀಮಂತ ಒಂಟಿಮುರಿ, ಜಮಖಂಡಿ, ತೇರದಾಳ ಮೊದಲಾದ ದೇಸಾಯಿಯರೇ ಬಗೆ ಹರಿಸುತ್ತಿದ್ದರೆಂದು ಕಂಡುಬರುತ್ತದೆ ಉದಾಹರಣೆಗಾಗಿ:— ತಾ. ೨೨-೨-೧೭೩೬ನೆಯ ಇಸ್ವಿಯ ದಿವಸ ಶ್ರೀಮಂತ ಗದಿಗೆಪ್ಪ ನಂದೇರಾವ ದೇಸಾಯಿ ಪರಗಣೆ ಜಮಖಂಡಿ ಇವರು ಮುಕುಂದ ಮಾಣಕೇಶ್ವರ ಹಾಗು ತೇರದಾಳ ಸ್ವಾಮಿಗಳ ಆಪ್ತರಾದ ರೇವಪ್ಪಾ ಮಠದದೇವರು (ಕಲ್ಯಾಣಪ್ಪನ ಮಠದ ಪಟ್ಟದ ದೇವರು) ಜಮಖಂಡಿ ಇವರ ಸಹಾಯದಿಂದ ಒಂದು ವ್ಯಾಜ್ಯವನ್ನು ಬಗೆಹರಿಸಿ ಅದನ್ನು ಅವರು ಅದೇ ದಿವಸ ಶ್ರೀಮಂತ ಲಖಮಗೌಡಾ ಬಸವಪ್ರಭು ದೇಸಾಯಿ ಮತ್ತು ನಾತಗೌಡಾ ಮಹಾಲಾನಿಹಾಯ ಮತ್ತು ಸರದೇಸಾಯಿ ಮಾಮಲೆ ಮೂರ್ತಿಜಾಬಾದ (ಮಿರ್ಜಿ) ಮುಕ್ಕಾಮ ಒಂಟಿಮುರಿ ಇವರಿಗೆ ತಿಳಿಸಿರುವರು ಈ ತೀರ್ಪನ್ನು ಅದೇ ದಿವಸ ಶ್ರೀಮಂತ ಪಾಸಪ್ಪಾ ದೇಸಾಯಿ ಹನಗಂಡಿ ಇವರು ತೇರದಾಳ ಬ್ರಹನ್ಮಠದ ಸ್ವಾಮಿಗಳಿಗೆ ತಿಳಿಸಿರುವರು. ಆದರಲ್ಲಿ ಆಗಿನ ಶ್ರೀಮಂತ ಹನಗಂಡಿ ಧೊರಗಳು ತಮಗೆ ಶಿಷ್ಯವರ್ಗವೆಂದು ಸಂಬೋಧಿಸಿಕೊಂಡು ಮಠದ ಸ್ವಾಮಿಗಳಿಗೆ ಗುರುಲಿಂಗಜಂಗಮ ರಾಜಮಾನ್ಯರಾಜಶ್ರೀ ಎಂದು ಸಂಬೋಧಿಸಿರುವರು. ಇದರ ಮೇಲಿಂದ ಆ ಕಾಲಕ್ಕೆ ಈ ತೇರದಾಳಮಠದ ಸ್ವಾಮಿಗಳ ವರ್ಚಸ್ಸು ಎಷ್ಟಿತ್ತೆಂಬುವದು ವಾಚಕರಿಗೆ ಗೊತ್ತಾಗುವದು. ಇದು ಅಲ್ಲದೆ ಈ ಮಠದ ಸ್ವಾಮಿಗಳಿಗೆ ಶ್ರೀಮಂತ ಒಂಟಿಮುರಿ ಸರದೇಸಾಯಿಯರ ಪೂರ್ವಜರು "ದೇವರು" ಎಂದು ಸಂಬೋಧಿಸಿ ಬರೆದ ಅನೇಕ ಹಳೇ ಪತ್ರಗಳಿರುವವು

ಈ ಎಲ್ಲ ಮನೆತನಗಳಲ್ಲಿ ಶ್ರೀಮದನಾದಿ ಅಲ್ಲಮಪ್ರಭುವಿನ ಹೆಸರುಗಳ ಹೊರ್ತು ಇನ್ನೊಂದು ಹೆಸರೇ ಸಿಗುವದಿಲ್ಲ. ಅದುದರಿಂದ ಈ ಎಂಟೂ ಮನೆತನದವರು ಪುರಾತನಕಾಲದಿಂದ ನಡೆಸುಬಂದ ತಮ್ಮ ಶ್ರೀಪ್ರಭುದೇವರ ಮಠವೆಂಬ ಉಪನಾಮವನ್ನು ಈ ಹೆಸರುಗಳ ತೊಂದರೆಯ ಮೂಲಕ ಬಿಟ್ಟುಕೊಟ್ಟು ಇತ್ತೀಚಿಗೆ ಅದನ್ನು ಬದಲು ಮಾಡಿಕೊಂಡು ವ್ಯವಹರಿಸುತ್ತಿರುವರು.

ತೇರದಾಳದ ಶ್ರೀಪ್ರಭುದೇವರ ಐಕ್ಯಸ್ಥಾನದ ಹತ್ತಿರ ಮೂಲಪುರುಷನಾದ ಚನ್ನಪ್ಪದೇವನ ಪುರುಷ ಸಂತತಿಯು ಹೊರತು ಇನ್ನುಳಿದವರಿಗೆ ಪ್ರವೇಶಿಸಲು ಪ್ರತಿಬಂಧವಿರುವದು ಇದು ಈವರೆಗೂ ನಡೆಯುತ್ತ ಬಂದಿರುವದು. ಆದರೆ ಶ್ರೀಮನ್ನಿರಂಜನ ನಿರಾಭಾರಿಗಳಾದ ವಿರಕ್ತರು ಹಾಗು ಘನಲಿಂಗಚಕ್ರವರ್ತಿಗಳಾದ ಪಟ್ಟಚರಾಧಿಕಾರಿಗಳು ಮಾತ್ರ ಶ್ರೀಪ್ರಭುದೇವರ ದರ್ಶನಕ್ಕೆ ಬಂದಾಗ ಗರ್ಭ ಮತ್ತು ಅದರ ಮುಂದಿನ ರಂಗಮಂಟಪ ಈ ಎರಡರ ಮಧ್ಯದಲ್ಲಿ ಬಂದು ಕೂತು ದರ್ಶನಾಶೀರ್ವಾದಗಳನ್ನು ತೆಗೆದುಕೊಂಡು ಹೋಗುವರು. ಚಿತ್ರಕಲ್ಲದುರ್ಗದ ಶ್ರೀಮನ್ನಿರಂಜನ ಮಹಾಲಿಂಗಸ್ವಾಮಿಗಳು ಹಿಂದಕ್ಕೆ ಸಂಚಾರದಲ್ಲಿರುವಾಗ್ಗೆ ಮಹಾಲಿಂಗಪುರದಲ್ಲಿ ಮುಕ್ಕಾಮು ಮಾಡಿ ಪಾದಚಾರಿಗಳಾಗಿ ತೇರದಾಳಕ್ಕೆ ಶ್ರೀಪ್ರಭುವಿನ ದರ್ಶನಕ್ಕೆ ಬಂದು ದಂಡಖಂಡನಾದಿಗಳನ್ನು ಕೊಟ್ಟು ದರ್ಶನಾಶೀರ್ವಾದಗಳನ್ನು ಪಡಕೊಂಡು ಹೋದದ್ದು ನೋಡಿದ್ದನ್ನು ಎಷ್ಟೋ ಮುಪ್ಪಿನವರು ತೇರದಾಳದಲ್ಲಿ ಈಗ್ಯೂ ಹೇಳುತ್ತಿರುವರು. ಅದೇ ಪರಂಪರೆಯಂತೆ ಚಿತ್ರಕಲ್ಲದುರ್ಗಪೀಠದ ಸದ್ಯದ ಅಧಿಕಾರಿಗಳಾದ ಶ್ರೀಮನ್ನಿರಂಜನ ಜಯದೇವ ಮುರಘರಾಜೇಂದ್ರ ಮಹಾಸ್ವಾಮಿಗಳು ಕ್ರಿ. ಶ. ೧೯೧೧ ಮತ್ತು ೧೯೨೦ರಲ್ಲಿ ತೇರದಾಳಕ್ಕೆ ಬಂದು ಮುಕ್ಕಾಮು ಮಾಡಿ ತಮ್ಮ ಪೂರ್ವ ಸಾಂಪ್ರದಾಯಕ್ಕನುಸಾರವಾಗಿ ಶ್ರೀಮಹಾಲಿಂಗಸ್ವಾಮಿಗಳಂತೆ ಶ್ರೀಪ್ರಭುದೇವರ ಬೃಹನ್ಮಠದವರೆಗೆ ಪಾದಚಾರಿಗಳಾಗಿ ಬಂದು ದಂಡಖಂಡನಾದಿಗಳನ್ನು ಕೊಟ್ಟು ಶ್ರೀಪ್ರಭುದೇವರ ದರ್ಶನಾಶೀರ್ವಾದಗಳನ್ನು ಪಡೆದುಕೊಂಡು ಹೋದರು. ಉಳಿದ ಭಕ್ತಮಾಹೇಶ್ವರರು ಮಡಿಯಿಂದ ರಂಗಮಂಟಪದಲ್ಲಿ ಬಂದು ದರ್ಶನಾಶೀರ್ವಾದ ತೆಗೆದುಕೊಂಡು ಹೋಗುತ್ತಿರುವರು.

---



# ಒಪ್ಪೋಲೆ

| ಪು. | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೧. | ೧೨ | ಶ್ರೀ ಪ್ರಭು ದೇವರೆಂದು | ಶ್ರೀ ಪ್ರಭು ದೇವರದೆಂದು |
| ೧. | ೧೨ | ವಾಚಕರಗೆ | ವಾಚಕರಿಗೆ |
| ೬. | ೫ | ಹೊಗಳಲ್ಪಟ್ಟ ನೆಂದೂ | ಹೊಗಳಲ್ಪಟ್ಟ ನೆಂದು ಹೇಳಿರು ವುದರಿಂದಲೂ |
| ೬. | ೧೧ | ಮಾಡಿದನೆಂದೂ | ಮಾಡಿದನೆಂದು |
| ೯. | ೧೩ | ಹೇಗೆ | (ಬಿಟ್ಟೋದಬೇಕು) |
| ೨೦. | ೬ | ಕಲೋತ್ತುಂಗ | ಕುಲೋತ್ತುಂಗ |
| ೨೧. | ೯ | ಭೂದೇವನ | ಪ್ರಭುದೇವನ |
| ೨೪. | ೧೪ | ವರ್ಣನವದೆ | ವರ್ಣನವಿದೆ |
| ೨೮. | ೨೯ | ಪ್ರಥ್ವ್ಯಾಪ | ಪೃಥ್ವ್ಯಾಪ |
| ೨೮. | ೩೦ | ಯೋಗಗುರ್ಣ | ಯೋಗಗುಣ |
| ೩೧. | ೨೩ | ವಿಶೇಹ | ವಿಶೇಷ |
| ೩೨. | ೧೦ | ಶ್ವಾಚ್ಛ್ವಾಸವು | ಶ್ವಾಸೋಚ್ಛ್ವಾಸವು |
| ೩೨ | ೨೧ | ಶ್ವಾಸೋಚ್ಛ್ವಾಸಗಳು | ಶ್ವಾಸೋಚ್ಛ್ವಾಸವು |
| ೩೨. | ೨೯ | ತನ್ನ | (ಬಿಟ್ಟೋದಬೇಕು) |
| ೩೮ | ೧೫ | ಆಗಮವು | ಆಗಮನವು |
| ೪೦. | ೧ | ಒಂದು | ಬಂದು |
| ೪೧. | ೨ | ಇಹೊತ್ತಿಗೂ | ಈ ಹೊತ್ತಿಗೂ |
| ೪೩. | ೧೯ | ಬಸವರತ್ನ | ಬಸವಪತ್ನ |
| ೪೯. | ೧ | ವಿರುಪಾಕ್ಷಯ ಮಂಜಿ | ವಿರೂಪಾಕ್ಷ ಯಮಾಜಿ |
| ೫೨. | ೧೬ | ಪೂರ್ವಕ್ಕೈ | ಪೂರ್ವಕ್ಕೆ |
| ೫೨. | ೨೪ | ಮುಖ್ಯವಾಗಿ | ಮುಖ್ಯವಾಗಿ |
| ೫೫. | ೨೬ | ಪ್ರತಿಶಿಸ್ಯರ | ಪ್ರತಿಶಿಷ್ಯರ |
| ೫೫. | ೨೭ | ಮಂಡಲಾಚಾ ರರೇ | ಮಂಡಲಾಚಾ ರ್ಯರೇ |
| ೫೮. | ೨೬ | ತೊರಿಸಿದ್ದರಿಂದ | ತೋರಿಸಿದ್ದರಿಂದ |
| ೬೩. | ೬ | ತೇರದಾಳದಲ್ಲಿ | ತೇರದಾಳದಲ್ಲಿಯು |
| ೬೩. | ೯ | ಕರೆದುಕೊಂಡು | ಕರೆದುಕೊಂಡು |

| ಪು. | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೬೩. | ೨೭ | ಭೂದೇವನು | ಪ್ರಭುದೇವನು |
| ೬೮. | ೧೪ | ಹೊಗಲಿಲ್ಲ | ಹೋಗಲಿಲ್ಲ |
| ೬೮. | ೨೯ | ಬಸವನಪ್ರಭು | ಬಸವಪ್ರಭು |
| ೭೧. | ೩ | ತ್ರಿಪುರಾಂತಕ ಲಿಂಗವು | ತ್ರಿಪುರಾಂತಕ ಲಿಂಗನು |
| ೭೧. | ೨೩ | ಹನವಗಂಡಿಯು | ಹನಗಂಡಿಯು |
| ೭೮. | ೯ | ಪರಶೀಲನದಿಂದ | ಪರಿಶೀಲನದಿಂದ |
| ೮೦. | ೨೩ | ಪುಸ್ತಕಗಳ | ಮಸ್ತಕಗಳ |
| ೮೧. | ೧೬ | ಲಿಂಗಾಸೃಷ್ಟಿ ಯೊಳಗೆ | ಲಿಂಗಸೃಷ್ಟಿ ಯೊಳಗೆ |
| ೮೧. | ೧೬ | ಲಿಂಗನಂದಾ ತಿಶಯದ | ಲಿಂಗಾನಂದಾ ತಿಶಯದ |
| ೮೨. | ೨೫ | ನಿರ್ಯಾಣ ಪ್ರಾಪ್ತಿಯ | ನಿರ್ವಾಣ ಪ್ರಾಪ್ತಿಯ |
| ೮೩. | ೨೨ | ಗಂಥಮಾಲೆಯು | ಗ್ರಂಥಮಾಲೆಯು |
| ೮೭. | ೩ | ಅಲ್ಲಿದೆ | ಅಲ್ಲದೆ |
| ೯೫. | ೨೯ | ಮುಂದಿದ | ಮುಂದಿನ |
| ೯೨. | ೨೨ | ಗಣಾಧ್ಯಕ್ಷನ | ಗಣಾಧ್ಯಕ್ಷನು |
| ೯೮ | ೩೧ | ಪಾಯಿದಾ | ಫಾಯಿದಾ |
| ೯೯. | ೫ | ಗುರು | ಗುರುಃ |
| ೧೦೦. | ೨೬ | ಅಗಮ | ಅಗಮ್ಯ |
| ೧೦೩. | ೧೬ | ನಿನಂಜನ | ನಿರಂಜನ |
| ೧೦೪. | ೧೩ | ಮಹೀಭಾಗೆ | ಮಹೀಭಾಗೇ |
| ೧೦೫. | ೧೨ | ಮಲ್ಲಿಕಾರ್ಜು ನನ | ಮಲ್ಲಿಕಾರ್ಜುನನ |
| ೧೦೯. | ೧೩ | ಸತಜ್ಞಾನ ದಲ್ಲಿಯೇ | ಸತ್ಯಜ್ಞಾನ ದಲ್ಲಿಯೇ |
| ೧೧೮. | ೧೦ | ಶಾಂತವೀ ಸ್ವಾಮಿ | ಶಾಂತವೀರ ಸ್ವಾಮಿ |
| ೧೨೩. | ೩ | ತಮ್ಮ | ತನ್ನ |
| ೧೨೭. | ೨ | ೧೬೭೫ | ೧೭೨೫ |
| ೧೪೨. | ೮ | ೧೬೭೫ | ೧೭೨೫ |
| ೧೪೯. | ೩ | ನಿರಂಖನ | ನಿರಂಜನ |

ಸೂಚನೆ—ಬಹಳ ಅರ್ಥ ವ್ಯತ್ಯಾಸವಾಗುವ ಶಬ್ದಗಳದಷ್ಟೆ ಶುದ್ಧಿ ಪತ್ರ ಕೊಟ್ಟಿದೆ.